# ಮೃಚ್ಛಕಟಿಕ

ಎರಡನೇ ಪಿ. ಯು. ಸಿ.

ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ



PRESCRIBED BY THE BOARD OF PRE-UNIVERSITY EDUCATION, BANGALORE

# ಮೃಚ್ಛಕಟಿಕ

ಶೂದ್ರಕ ಕವಿಯ ಸಂಸ್ಕೃತ ಮೃಚ್ಛಕಟಿಕ ನಾಟಕದ
ಕನ್ನಡ ಛಾಯಾನುವಾದ

ಎಸ್. ಎಸ್. ಲಕ್ಷ್ಮೀನಾರಾಯಣ ಭಟ್ಟ

Prescribed by the Board of
Pre-University Education, Bangalore

## ಮುನ್ನುಡಿ

ಮೃಚ್ಛಕಟಿಕ ಸಂಸ್ಕೃತ ನಾಟಕ ಸಾಹಿತ್ಯದಲ್ಲೇ ಒಂದು ಅಚ್ಚರಿಗೊಳಿಸುವ ಕೃತಿ. ಇದನ್ನು ರಚಿಸಿದ ಶೂದ್ರಕನು ಭಾಸ, ಕಾಳಿದಾಸರಂಥ ಅಸಾಧಾರಣ ನಾಟಕಕಾರರನ್ನು ಅಕ್ಕಪಕ್ಕದಲ್ಲಿಟ್ಟು ಕೊಂಡೂ ತೇಜಸ್ಸುಗೆಡದೆ ಉಳಿದಿದ್ದಾನೆ ಎನ್ನುವುದೇ ಇದಕ್ಕೆ ಸಾಕ್ಷಿ. ಸ್ಪಷ್ಟವಾಗಿ ಅವನದ್ದೆಂದು ನಮಗೆ ದೊರೆತಿರುವ ಪೂರ್ಣ ನಾಟಕ ಇದೊಂದೇ. ಅವರಿಗಿರುವಂತೆ ಒಂದಿಲ್ಲೊಂದು ಕೃತಿಯ ಬೆಂಬಲ ಇವನಿಗಿಲ್ಲ. ಅಳಿದರೂ, ಉಳಿದರೂ ಅದು ಮೃಚ್ಛಕಟಿಕವೊಂದರಿಂದಲೇ. ಹೀಗಿದ್ದರೂ ಅವನು ಭಾಸ-ಕಾಳಿದಾಸರೊಡನೆ ಸಮಾನನಾಗಿ ಸ್ವೀಕೃತನಾಗುತ್ತಾನೆ. ಸಂಕ್ಷಿಪ್ತತೆ, ಗದ್ಯಪದ್ಯಗಳ ಔಚಿತ್ಯವರಿತ ಹಂಚಿಕೆ ಇಂಥ ಒಂದೆರಡು ಗುಣಗಳಲ್ಲಿ ಅವರು ಇವನನ್ನು ಮೀರಿದರೆನ್ನಿಸಿದರೂ, ಲೋಕಜೀವನದ ಸಂಕೀರ್ಣ ಗ್ರಹಿಕೆಯಲ್ಲಿ ಶೂದ್ರಕ ನಮ್ಮ ಎಲ್ಲ ನಾಟಕ ಕಾರರನ್ನೂ ಸ್ಪಷ್ಟವಾಗಿ ಹಿಂದೆ ಹಾಕಿದ್ದಾನೆ.

ವಿಚಿತ್ರವೆಂದರೆ ಶೂದ್ರಕನ ಈ ಒಂದು ನಾಟಕ ಕೂಡ ದೊಡ್ಡ ಋಣವೊಂದಕ್ಕೆ ಆಭಾರಿಯಾದದ್ದು. ಮೃಚ್ಛಕಟಿಕದ ಹತ್ತು ಅಂಕಗಳಲ್ಲಿ ನಾಲ್ಕು ಅಂಕ 'ದರಿದ್ರ ಚಾರುದತ್ತ' ದಿಂದ ಬಂದವು. ದರಿದ್ರ ಚಾರುದತ್ತ ಭಾಸ ರಚಿಸಿದ್ದೆಂದು ಭಾವಿಸಲಾಗಿರುವ ನಾಲ್ಕು ಅಂಕಗಳ ಪುಟ್ಟ ನಾಟಕ. ಈಗಿರುವ ರೀತಿಯಲ್ಲಿ ಚಾರುದತ್ತವನ್ನು ಇಡಿಯಾದ ನಾಟಕವೆಂದು ಕರೆಯುವುದು ಕಷ್ಟ. ಆ ನಾಲ್ಕು ಅಂಕಗಳಲ್ಲಿ ಪಾತ್ರ ಸನ್ನಿವೇಶಗಳು ಇನ್ನೂ ಬೆಳೆಯುತ್ತಿರುವುದು, ಯಾವುದೋ ಪರಿಣಾಮದ ಕಡೆ ಚಲಿಸುತ್ತಿರುವುದು ಕಾಣುತ್ತದೆ. ನಮ್ಮನ್ನು ಭಾವನಾತ್ಮಕ ವಾದ ಏಳು-ಬೀಳುಗಳಲ್ಲಿ ಸುತ್ತಾಡಿಸಿ, ಒಂದು ನಿರ್ದಿಷ್ಟ ಪರಿಣಾಮಕ್ಕೆ ಒಳಪಡಿಸಿ ನಂತರ ಮುಕ್ತಾಯ ಕಾಣುವ ರೀತಿ ಅಲ್ಲಿಲ್ಲ. ನಾಟಕ ಹಠಾತ್ತಾಗಿ ಕೊನೆಯಾದ ಹಾಗಿದೆ. ಬಹುಶಃ ಅದು ಭಾಸನ ಒಂದು ಅಪೂರ್ಣ ನಾಟಕ. ಹಾಗೆ ಹೇಳಲು ಬೇಕಾದ ಕೆಲವು ಅಂತಃಸಾಕ್ಷ್ಯಗಳೂ ಅದರಲ್ಲಿ ಸಿಗುತ್ತವೆ. ಶೂದ್ರಕ ಆ ನಾಲ್ಕು ಅಂಕಗಳಿಗೆ ಇನ್ನೂ ಆರು ಅಂಕಗಳನ್ನು ಸೇರಿಸಿ ತಾನೇ ಅದನ್ನು ಪೂರ್ಣ [illegible]. ಹಾಗೆ ಮಾಡುವಾಗ ಆ ನಾಲ್ಕು ಅಂಕಗಳ ಮಾತನ್ನು ತನಗೆ ತಕ್ಕ ರೀತಿಯಲ್ಲಿ ಅಲ್ಲಿ ಇಲ್ಲಿ ಮಾರ್ಪಡಿಸಿಕೊಂಡಿದ್ದಾನೆ. ಹತ್ತು ಅಂಕಗಳ ಇಡೀ ನಾಟಕ ಒಂದು ಶೈಲಿಯಲ್ಲಿ, ಒಂದೇ ದೃಷ್ಟಿಗೆ ಅನುಗುಣವಾಗಿ ಹರಿಯುವಂತೆ ನೋಡಿಕೊಂಡಿದ್ದಾನೆ. ಭಾಸನ ಚಾರುದತ್ತ ಅಪೂರ್ಣವಾಗಿತ್ತೆನ್ನಲು ಶೂದ್ರಕ ಅದನ್ನು ತನ್ನ ಕೃತಿಯಲ್ಲಿ ಸೇರಿಸಿ ಕೊಂಡಿದ್ದೇ ಸಾಕ್ಷಿ. ಅರ್ಧಕ್ಕೆ ನಿಂತ ನಾಟಕಕ್ಕೆ ಒಂದು ಪೂರ್ಣತೆ ದೊರೆಯುವುದರಿಂದ ಜನ ಸಹ ಇಂಥ ಸ್ವೀಕಾರವನ್ನು ಮನ್ನಿಸಿರಬೇಕು. ಇಲ್ಲದಿದ್ದರೆ ತನ್ನ ಕಾಲಕ್ಕೆ ಪ್ರಸಿದ್ಧನಾಗಿದ್ದ ಶ್ರೇಷ್ಠ ನಾಟಕಕಾರನೊಬ್ಬನ [illegible]ಒಬ್ಬ ಹೀಗೆ ಅನಾಮತ್ತಾಗಿ ತೆಗೆದುಕೊಳ್ಳಲು ಲೋಕ ಬಿಟ್ಟೀತು ಹೇಗೆ? [illegible] ಅಂಕಗಳನ್ನು ಬರೆಯಬಲ್ಲ ಶೂದ್ರಕನಂಥ ಸಮರ್ಥ ಕವಿ ಇನ್ನೊ[illegible]ಗೆ ಏಕೆ ಸೇರಿಸಿಕೊ[illegible]ದ್ದ ?

ಸರಳವಾದ 'ದರಿದ್ರ ಚಾರುದತ್ತ' ನಾಟಕ ಯೋಗ್ಯರೀತಿಯಲ್ಲಿ ಬಳಸಿದರೆ ಎಂಥ ಸಂಕೀರ್ಣ ನಾಟಕವಾಗುವ ಸತ್ವದಿಂದ ಕೂಡಿದ್ದೆನ್ನುವುದು ಶೂದ್ರಕನಿಗೆ ಹೊಳೆದಿರಬೇಕು. ಮುಗಿದು ನಿಂತಂತೆ ಕಾಣುವ ನಾಟಕ ನ್ಯಾಯವಾಗಿ ರೂಪುಗೊಳ್ಳಬೇಕಾದ ನಾಟಕದ ಒಂದು ಕಿರಿಯರ್ಧ ಮಾತ್ರವಾಗಿರುವುದನ್ನು ಅವನು ಗ್ರಹಿಸಿದ್ದೇ ಒಂದು ಹಿರಿತನ ಎನ್ನಬೇಕು. ದರಿದ್ರ ಚಾರುದತ್ತ ಕೇವಲ ಒಂದು ಪ್ರೇಮಕಥೆಯನ್ನಷ್ಟೇ ವಸ್ತುವಾಗಿ ಉಳ್ಳದ್ದು. ಹಾಗಿದ್ದರೂ ಅದು ಪ್ರತಿಜ್ಞಾ-ಯೌಗಂಧರಾಯಣ, ಸ್ವಪ್ನವಾಸವದತ್ತಗಳಂಥ ನಾಟಕಗಳ ಸಾಲಿನಲ್ಲಿ ನಿಲ್ಲುವ ಎತ್ತರದ್ದಲ್ಲ. ಗಣಿಕೆಯರ ಕುಲದಲ್ಲಿ ಬಂದ ಚೆಲುವೆಯೂ ಸಿರಿವಂತೆಯೂ ಆದ ಯುವತಿಯೊಬ್ಬಳು ಹಣಕ್ಕಿಂತ ಅನುರಾಗವನ್ನು ದೊಡ್ಡದಾಗಿ ಭಾವಿಸಿದ್ದನ್ನು ಹೇಳಿದುದೇ ಅದರ ವಸ್ತುವೈಶಿಷ್ಟ್ಯ ಎನ್ನಬೇಕು. ನಿರೂಪಣೆಯಲ್ಲಿ ಅದು ಭಾಸನದೇ ಎಂದು ಒಪ್ಪಿಕೊಳ್ಳಬಹುದಾದಷ್ಟು ಉತ್ತಮವಾಗಿದೆ. ಇಲ್ಲಿಗೆ ದರಿದ್ರ ಚಾರುದತ್ತದ ವಿಶೇಷವೆಲ್ಲ ಮುಗಿದುಹೋಯಿತು.

ಇದಕ್ಕೆ ಶೂದ್ರಕ ಸೇರಿಸಿರುವ ಅಂಶಗಳು ಬರಿಯ ವಸ್ತುವನ್ನು ಮಾತ್ರ ಬೆಳೆಸಿ ಚಿಕ್ಕ ನಾಟಕವನ್ನು ದೊಡ್ಡ ನಾಟಕ ಮಾಡುವಷ್ಟಕ್ಕೆ ಮುಗಿಯದೆ ನಾಟಕದ ದೃಷ್ಟಿಯನ್ನೇ ಬದಲಿಸಿವೆ. ದರಿದ್ರ ಚಾರುದತ್ತ ತನ್ನ ವಸ್ತುವನ್ನು ಅಂದಿನ ಬದುಕಿನ ಹಿನ್ನೆಲೆಯಲ್ಲಿ ಹಿಡಿದ ನಾಟಕವಲ್ಲ. ಅದಕ್ಕೆ ಎದ್ದು ಕಾಣುವಂಥ ಕಾಲ-ದೇಶಗಳ ಒಂದು ನಿರ್ದಿಷ್ಟತೆಯೇ ಇಲ್ಲ ಎನ್ನಬಹುದು. ಒಂದು ಕೃತಿ ಉತ್ತಮ ಕೃತಿ ಎನ್ನಿಸಿಕೊಳ್ಳಲು ಅದು ಕಾಲದೇಶಾತೀತವಾದರೆ ಸಾಲದು. ಕಾಲ-ದೇಶಬದ್ಧವೂ ಆಗಬೇಕು. ಪರಸ್ಪರ ವಿರುದ್ಧವಾಗಿ ತೋರುವ ಈ ಮಾತು ನಿಜವಾಗಿ ಒಂದಕ್ಕೊಂದು ಪೂರಕ. ತನ್ನ ಕಾಲದ ಜೀವನ ವಿವರಗಳ ಮೂಲಕ ಕಟ್ಟಿಕೊಂಡ ಒಡಲು ಒಂದು ಕೃತಿಗೆ ಅಗತ್ಯವಾಗಿರಬೇಕು. ಇದರಿಂದಲೇ ಅದು ಸಮಕಾಲೀನವಾಗುವುದು. ಹೀಗೆ ಕಾಲದೇಶಬದ್ಧವಾದ ವಿವರಗಳಲ್ಲಿ ಸೃಷ್ಟಿಗೊಂಡ ಕೃತಿಯು ಮೈ ಪ್ರಕಟಿಸುವ ವೈಚಾರಿಕತೆ ಮತ್ತು ಭಾವಮೌಲ್ಯಗಳು ಮಾತ್ರ ಅಂದಿನ ಕಾಲದೇಶಗಳನ್ನೂ ದಾಟಿ ಯಾವತ್ತೂ, ಎಲ್ಲೆಡೆಯೂ ಜನಗಳನ್ನು ತಾಗಬೇಕು. ತನ್ನ ಕಾಲದೇಶಗಳಿಗೇ ನಿಜವಾಗದ ಕೃತಿ ಅವುಗಳ ಗಡಿ ದಾಟಿ ನಿಜವಾದೀತೆನ್ನುವುದು ಅನುಮಾನದ ವಿಷಯವೇ. ವೈಯಕ್ತಿಕ ಅನುಭವದಿಂದ ಹುಟ್ಟಿಯೂ ಲೋಕಸಾಧಾರಣವಾಗುವಂತೆ, ಸಮಕಾಲೀನವಾದ ಮೈಯ ಮೂಲಕ ಪ್ರಕಟವಾಗಿಯೂ ಅದು ಕಾಲದೇಶಗಳನ್ನು ಮೀರಿ ಸಾರ್ವತ್ರಿಕವಾಗಬೇಕು; ಇದು ಎಲ್ಲ ಉತ್ತಮ ಕೃತಿಗಳಲ್ಲಿ ಇದ್ದೇ ಇರುವ ಒಂದು ಲಕ್ಷಣ.

ಶೂದ್ರಕ ಚಾರುದತ್ತಕ್ಕೆ ಸೇರಿಸಿದ ಅಂಶಗಳು ಆ ನಾಟಕಕ್ಕೆ ಇಂಥ ನಿರ್ದಿಷ್ಟತೆ ತಂದುಕೊಟ್ಟು ನಾಟಕವನ್ನು ಅದರ ಕಾಲದೇಶಗಳಲ್ಲಿ ನಿಜಗೊಳಿಸಿದುದು ಮಾತ್ರವಲ್ಲ, ಎರಡು ಸಹಸ್ರ ವರ್ಷಗಳ ಅಂತರದಲ್ಲಿ ನಿಂತ ನಮ್ಮ ಪಾಲಿಗೆ ಸಹ ಅದು ತನ್ನ ಖಾಸಗಿ ಚಹರೆಗಳಿಂದಾಗಿ ಅತ್ಯಂತ ವಾಸ್ತವವಾಗುವಂತೆ ಮಾಡಿವೆ. ಅವನು ಸೇರಿಸಿರುವ ಅಂಶಗಳು ನಾಟಕವನ್ನು ನಾಲ್ಕಂಕಗಳಿಂದ ಮುಂದಕ್ಕೆ ಬದಲಿಸದೆ ಆರಂಭದಿಂದ ಅದರ ನೋಟವನ್ನೇ ಬದಲಿಸಿವೆ. ದರಿದ್ರ ಚಾರುದತ್ತದ ಮೊದಲ ನಾಲ್ಕು ಅಂಕಗಳನ್ನು ತೆಗೆದುಕೊಂಡಿದ್ದರೂ ಅವು [illegible] ಕ್ರಮದಲ್ಲಿ ಉಳಿದಿಲ್ಲ. ಎರಡನೆಯ ಅಂಕ ಶೂದ್ರಕನ ಸ್ವಂತ ಸೃಷ್ಟಿ. ಅಲ್ಲಿ [illegible]ಗಾರರ ಜಗಳ ಬಡಿದಾಟಗಳು

ನಾಟಕದಲ್ಲಿ ಫಲಿಸುವ ಆ ಸಮಾಜದ ಚಿತ್ರಕ್ಕೆ ಒಂದು ಪ್ರಮುಖ ರೇಖೆಯಾಗಿ ಒದಗಿವೆ. ಇಡಿಯ ಒಂದು ಅಂಕ ಹೀಗೆ ದ್ಯೂತವಿಷಯಕ್ಕೆ ವಿನಿಯೋಗವಾಗಿರುವುದು ಈ ನಾಟಕವೊಂದರಲ್ಲಿಯೇ. ಹಾಗೆಂದು ಅದು ಒಟ್ಟು ನಾಟಕದ ಚೌಕಟ್ಟಿಗೆ ಹೊರತಾಗಿ ಸೃಷ್ಟಿಯಾಗಿಲ್ಲ. ಅಲ್ಲಿ ಬರುವ ಸಂವಾಹಕ ಹಿಂದೆ ಚಾರುದತ್ತನಲ್ಲಿ ಪರಿಚಾರಕನಾಗಿದ್ದವನು, ಈಗ ವಸಂತಸೇನೆಯಿಂದ ಉಪಕೃತನಾಗುವವನು. ಮುಂದೆ ಅವಳ ಬದುಕಿನ ವಿಷಮಗಳಿಗೆಯಲ್ಲಿ ಅಕಸ್ಮಾತ್ತಾಗಿ ಸಹಾಯಕ್ಕೆ ಒದಗುವವನು. ಹೀಗೆ ಮೂರು ಕಡೆಗಳಿಂದ ಆ ಅಂಕವನ್ನು ನಾಟಕಕ್ಕೆ ಬೆಸುಗೆ ಹಾಕಲಾಗಿದೆ. ಇದಲ್ಲದೆ ಹಾಳುದೇಗುಲಗಳನ್ನು ಹೊಕ್ಕು ಬಡಿದಾಡುತ್ತ ಬೀದಿಗಳಲ್ಲಿ ಒಬ್ಬರನ್ನೊಬ್ಬರು ಅಟ್ಟಿಸಿಕೊಂಡು ತಿರುಗುವ ಜೂಜುಗಾರರ ದೃಶ್ಯ ಅಂದಿನ ಆಡಳಿತದ ದುಸ್ಥಿತಿಯನ್ನು ತೋರಿಸೀತು. ಮುಂದಿನ ಅಂಕಗಳಲ್ಲಿ ಬರುವ ಘಟನೆಗಳು, ಮೊದಲನೆಯ ಅಂಕದ ಪ್ರಸಂಗಗಳು ಇದನ್ನೇ ಪರೋಕ್ಷವಾಗಿ ಸೂಚಿಸುತ್ತವೆ. ಆ ದೃಷ್ಟಿಯಿಂದಲೂ ಇದು ಒಟ್ಟು ನಾಟಕದ ಸತ್ವದಲ್ಲಿ ಭಾಗಿಯಾಗಿ ಅದಕ್ಕೆ ಬೆಸೆದುಕೊಂಡಿದೆ. ಕಡೆಯ ಐದು ಅಂಕಗಳು ಪೂರ್ಣವಾಗಿ ಶೂದ್ರಕನಿಂದಲೇ ಸೃಷ್ಟಿಯಾದವು. ಭಾಸನ ನಾಟಕವನ್ನು ತೆಗೆದುಕೊಂಡನೆನ್ನುವುದರಿಂದ ಅವನ ಯೋಗ್ಯತೆಯ ವಿಷಯದಲ್ಲಿ ಯಾರಿಗಾದರೂ ಶಂಕೆ ಬರುವುದಾದರೆ ಈ ಐದು ಅಂಕಗಳು ಆ ಶಂಕೆಯನ್ನು ನಿರ್ಮೂಲ ಮಾಡಬಲ್ಲವು. ಹಾಗೆ ನೋಡಿದರೆ ಇವುಗಳನ್ನು ರಚಿಸಿದವನ ಜೀವನಗ್ರಹಿಕೆ ಮತ್ತು ದೃಶ್ಯನಿರ್ಮಾಣ ಸಾಮರ್ಥ್ಯ ಇನ್ನಷ್ಟು ಹೆಚ್ಚಿನದೆಂದು ತಿಳಿಯುತ್ತದೆ. ಮೊದಲಿನ ನಾಲ್ಕು ಅಂಕಗಳನ್ನು ಸ್ವತಂತ್ರವಾಗಿ ಬರೆಯಬಲ್ಲ ಶಕ್ತಿ ಅವನಿಗಿತ್ತು ಎನ್ನುವುದನ್ನು ಇಡಿಯ ನಾಟಕವನ್ನು ಗ್ರಹಿಸಿದ ಯಾರೂ ಅಲ್ಲಗಳೆಯಲಾರರು.

ಭಾಸಶೂದ್ರಕರಿಬ್ಬರ ಸಾಮರ್ಥ್ಯ ಒಟ್ಟುಗೂಡಿ ಆ ದಿನಗಳ ಬಹುಶ್ರೇಷ್ಠ ನಾಟಕವೊಂದರ ನಿರ್ಮಾಣದಲ್ಲಿ ಫಲಿಸಿದೆ. ನಿರ್ದೇಶಕನ ಕೌಶಲವನ್ನು ಪರೀಕ್ಷಿಸುವಂತೆ ಏಕಕಾಲದಲ್ಲಿ ಎರಡು ಪ್ರಸಂಗಗಳು ರಂಗದ ಮೇಲೆ ಸ್ವತಂತ್ರವಾಗಿ ಘಟಿಸುವ ವೈಚಿತ್ರ್ಯ ಇಲ್ಲಿದೆ. ನಮ್ಮನ್ನು ಉದ್ದಕ್ಕೂ ಬೆರಗಿನಲ್ಲಿ ನಿಲ್ಲಿಸುವ ಘಟನೆಗಳು ನಾಟಕದುದ್ದಕ್ಕೂ ಸಾಲುಗಟ್ಟಿ ಹಾದು ಹೋಗುತ್ತವೆ. ಹರ್ಷ, ದುಃಖ, ಭಯ, ಬೆರಗು, ಉತ್ಸಾಹ, ಕನಿಕರಗಳು ಒಂದರ ಹಿಂದೊಂದು ಮನಸ್ಸನ್ನು ಕವಿಯುತ್ತವೆ. ನಾಟಕದ ಪ್ರತಿಪಾತ್ರಕ್ಕೂ ಅದರದೇ ಆದ ಒಂದು ವಿಶಿಷ್ಟಮುದ್ರೆ ಇದೆ. ಈ ಅಂಶದಲ್ಲಿ ಪಾಶ್ಚಾತ್ಯ ವಿಮರ್ಶಕರು ಶೂದ್ರಕನನ್ನು ಷೇಕ್ಸ್‌ಪಿಯರ್, ಮೋಲಿಯರರಿಗೆ ಹೋಲಿಸುತ್ತಾರೆ. ಮೃಚ್ಛಕಟಿಕದಲ್ಲಿರುವಂಥ ನಾಟ್ಯಕ್ರಿಯೆ, ಘಟನಾವೈವಿಧ್ಯ ಮತ್ತು ಕ್ರಿಯಾಸಾಂಗತ್ಯ ಆ ಕಾಲದ ನಮ್ಮ ಯಾವ ನಾಟಕಗಳಲ್ಲೂ ಇಲ್ಲ. ಪ್ರಣಯ, ಹಾಸ್ಯ, ದ್ಯೂತ, ಕೊಲೆ, ಕಳ್ಳತನ, ಬಡಿದಾಟ, ನ್ಯಾಯಾಲಯದ ದೃಶ್ಯ ರಥಗಳ ಅದಲುಬದಲಿನ ಚಮತ್ಕಾರ, ನಾಟಕದ ಕೊನೆಯಲ್ಲಿ ಎಲ್ಲವನ್ನೂ ತಲೆಕೆಳಗಾಗಿಸಿ ಜರುಗುವ ಪ್ರಭುತ್ವದ ಬದಲಾವಣೆ, ಈ ರಭಸದ ಕ್ರಿಯೆಯ ನಡುವೆ ಉದ್ದಕ್ಕೂ ನಮ್ಮ ಮನಸ್ಸಿನ ಮೇಲೆ ಬಲಿಯುತ್ತಲೇ ಹೋ... ಬಡವ ; ಕೊಳೆತ ವ್ಯವಸ್ಥೆಯ ಛಾವಣಿ ಕಣ್ಣೆದುರೇ ... ನರಡಿ ಸಿಗುವ, ಸಿಕ್ಕೂ ಸಾಯದೆ ಉಳಿದು ಬರುವ ... ರುಗಟ್ಟಿಸುವ ಕುತೂಹಲದಲ್ಲಿ



ವೇಗವಾಗಿ ಹಾಯಿಸುವ ಕೌಶಲ್ಯ ವಿಲಕ್ಷಣವಾದದ್ದು. ಈ ದಿನಗಳ ಯಾವ ಚಲನಚಿತ್ರದಲ್ಲಿ ಇದಕ್ಕಿಂತ ಹೆಚ್ಚಿನ ರಂಜಕಸಾಮಗ್ರಿಯಿದೆ? ಯಾವುದರಲ್ಲಿ ಇಷ್ಟೊಂದನ್ನೆಲ್ಲ ಬರಿಯ ರಂಜನೆಗಾಗಿ ತರದೆ ಮೌಲಿಕದರ್ಶನದ ಅಂಗವಾಗಿ ತಂದದ್ದಿದೆ?

ವಿಶೇಷವೆಂದರೆ ಈ ನಾಟಕ ಪುರೂರವ. ದುಷ್ಯಂತರಂಥ ದೇವಮಾನವರ ಕಥೆಯಲ್ಲ; ಅಗ್ನಿಮಿತ್ರ ಉದಯನರಂಥ ರಾಜರ ಕಥೆಯೂ ಅಲ್ಲ. ನಾಟಕದ ದೃಷ್ಟಿ ಚಾರುದತ್ತ, ವಸಂತಸೇನೆಯಂರಂಥ ಪ್ರಜೆಗಳ ಮೇಲಿದೆ. ನಾಟಕದ ಕ್ರಿಯೆ ದೇವಲೋಕ, ಅರಮನೆ, ಋಷ್ಯಾಶ್ರಮಗಳಿಂದ ಬೀದಿ, ಬಯಲು, ಬಡಮನೆ, ನ್ಯಾಯಾಲಯಗಳಿಗೆ ಬಂದಿದೆ. ಎಲ್ಲಕ್ಕಿಂತ ಮಿಗಿಲಾಗಿ ಅವರೆಗೆ ಸಂಸ್ಕೃತ ನಾಟಕ ವಿದೂಷಕರಿಗೆ ತೊಡಿಸಿದ್ದ ಅಸಹ್ಯವೇಷವನ್ನು ಮೈತ್ರೇಯ ನಾಟಕ ಮುಗಿಯುವ ಹೊತ್ತಿಗೆ ತನ್ನ ನಿರ್ಮಲ ಋಜು ವ್ಯಕ್ತಿತ್ವದ ಬಲದಿಂದ ಕಳಚಿ ಎಸೆದಿದ್ದಾನೆ. ಅಷ್ಟೇ ಅಲ್ಲ. ಖಳನಾಯಕನಾದ ಶಕಾರನೇ ವಿದೂಷಕನೂ ಆಗಿಬಿಡುವ ವಿಚಿತ್ರ ಇಲ್ಲಿದೆ. ಶಕಾರನ ಮಾತುಗಳಲ್ಲಿನ ಪೆದ್ದುತನಕ್ಕೂ, ಅವನ ಕೃತ್ಯಗಳ ಕೀಳುತನಕ್ಕೂ ಗುಪ್ತಸಂಬಂಧದ ಮೈತ್ರಿಯಿದೆ. ಪುರಾಣ, ಚರಿತ್ರೆ, ವರ್ತಮಾನಗಳ ಗಡಿಗಳನ್ನು ಅಳಿಸಿ ಎಲ್ಲದರ ಕಲಸು ಮೇಲೋಗರ ಮಾತಾಡಿ ನಗಿಸುವ ಶಕಾರ ನಿಜದ ಬದುಕಿನಲ್ಲಿ ಶಿಸ್ತಿನ ಗಡಿಗಳನ್ನು ಮುರಿಯುವ, ಕಂಡವರ ಬದುಕಿನಲ್ಲಿ ಹಾಹಾಕಾರ ಸೃಷ್ಟಿಸುವ ಕ್ರೂರಿಯಾಗಿದ್ದಾನೆ. ಅವನಿಗೆ ಯಾವುದರ ಬಗ್ಗೆ ಗೌರವವಿದೆ? ತನ್ನಿಂದ ಹಿಡಿದು ಎಲ್ಲರ ಮೇಲೆ ಕೆಸರೆರಚಿ ನಗುವ ಅವನ ಪೈಶಾಚಿಕ ಹುಡುಗಾಟದಲ್ಲಿ ಸಿಡಿಯುವ ಅಸಂಬದ್ಧತೆ ಸಂಸ್ಕೃತ ನಾಟಕಗಳಲ್ಲೇ ಅನನ್ಯವಾದದ್ದು.

ಉಳಿದ ನಾಟಕಕಾರರಿಗೂ ಶೂದ್ರಕನಿಗೂ ದೊಡ್ಡ ಭೇದವಿದೆ. ಅವನು ತೆಗೆದುಕೊಂಡ ನ್ಯಾಯವಾದ ಸ್ವಾತಂತ್ರ್ಯವನ್ನು ಗಮನಿಸಿದರೇ ಇದು ತಿಳಿಯುತ್ತದೆ. ಶಾಸ್ತ್ರದಲ್ಲಿ ಉಕ್ತವಾದ ನಾಟಕದ ಹಲವು ನಿಯಮಗಳನ್ನು ಅವನು ಅಲಕ್ಷಿಸಿದ್ದಾನೆ. ಮೃಚ್ಛಕಟಿಕ ಒಂದು ಪ್ರಕರಣ ತಾನೆ? ಅದರ ನಿಯಮದಂತೆ ಶೂದ್ರಕ ನಾಯಕ ನಾಯಿಕೆಯರ ಹೆಸರನ್ನೇ ನಾಟಕಕ್ಕೆ ಶೀರ್ಷಿಕೆಯಾಗಿ ಕೊಡಬೇಕು; ಕೊಟ್ಟಿಲ್ಲ. ನಾಯಕ ಎಲ್ಲಾ ಅಂಕಗಳಲ್ಲಿ ರಂಗದ ಮೇಲೆ ಬರಬೇಕು; ಬಂದಿಲ್ಲ. ಕುಲಸ್ತ್ರೀ (ಧೂತಾದೇವಿ) ಗಣಿಕ (ವಸಂತಸೇನೆ) ಒಟ್ಟಿಗೆ ನಿಲ್ಲಬಾರದು: ನಿಂತಿದ್ದಾರೆ. ಮಾತಾಡಬಾರದು; ಆಡಿದ್ದಾರೆ. ಇದರಿಂದ ಏನೂ ಕೊಳ್ಳೆಹೋಗಿಲ್ಲ. ಬದಲು ನಾಟಕ ಇನ್ನಷ್ಟು ಕಳೆಗೊಂಡಿದೆ, ವ್ಯಂಜಕ ಬಲ ಪಡೆದಿದೆ. ಧೂತಾದೇವಿ ವಸಂತಸೇನೆಯನ್ನು ಸ್ವಾಗತಿಸುತ್ತ ತಂಗಿ ಎಂದು ಕರೆಯುವಲ್ಲಿನ ಔಚಿತ್ಯವನ್ನು ಯಾವ ಶಾಸ್ತ್ರ ತಾನೇ ತಿಳಿದೀತು? ಶಾಸ್ತ್ರಕ್ಕೆ ಅಡಿಯಾಳಾಗದೆ ಅದಕ್ಕೇ ಇನ್ನಷ್ಟು ಹೊಸಹೊಸ ತಿಳಿವಳಿಕೆ ಕಲಿಸಬಲ್ಲ ಇಂಥ ಧೈರ್ಯ, ವಿವೇಕ ಇರುವುದು ತಾನು ಕೈಗೊಂಡ ಕಾರ್ಯದ ಹೃದಯ ಬಲ್ಲ ಪ್ರತಿಭಾವಂತನಿಗೆ ಮಾತ್ರ. ಶೂದ್ರಕ ಅಂಥ ನಾಟಕಕಾರ.

ಭಾಸನ ನಾಟಕ ಜೀವನದ ಕೋಮಲ ನಿರ್ಮಲ ಮುಖಗಳನ್ನು ನೋಡುವಂಥದು. ಅದು ಬದುಕಿನ ಒಂದು ಮುಖವನ್ನು, ಅಪರೂಪದ ಮುಖವನ್ನು ಮಾತ್ರ ತೋರಿಸುತ್ತದೆ. ಸ್ವಾರ್ಥ, ವಂಚನೆ, ಕ್ರೌರ್ಯ, ಭಯ, ಚಪಲಗಳು ತುಂಬಿದ ಅದರ ಇನ್ನೊಂದು ಮುಖವನ್ನು ಶೂದ್ರಕ

ಅದಕ್ಕೆ ಜೋಡಿಸಿ ಒಂದು ಇಡಿಯಾದ ಲೋಕದರ್ಶನ ಒದಗಿಸಿದ್ದಾನೆ. ಈ ಕಾರಣದಿಂದಾಗಿ ಮೃಚ್ಛಕಟಿಕ ಭಾರತದ ಬಹುಶ್ರೇಷ್ಠ ನಾಟಕಗಳಲ್ಲಿ ಒಂದು.

ಮೃಚ್ಛಕಟಿಕದ ಈ ಕನ್ನಡರೂಪವನ್ನು ಛಾಯಾನುವಾದ ಎಂದು ಕರೆದುಕೊಂಡಿದ್ದೇನೆ. ಇದು ಮೂಲದ 'ಮಕ್ಷಿಕಾಂ ಮಕ್ಷಿ' ಅನುವಾದವಲ್ಲ. ಮೂಲ ತುಂಬ ವಿಸ್ತಾರವಾದದ್ದು. ಇದು ಅದರ ಸಂಗ್ರಹಾನುವಾದ. ಆಧುನಿಕ ರಂಗಭೂಮಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಮೂಲವನ್ನು ಸಂಗ್ರಹಿಸಿದ್ದೇನೆ. ನಮ್ಮ ದಿನದಿನದ ಮಾತಿಗೆ ಹತ್ತಿರವಾಗುವಂತೆ ಇಲ್ಲಿಯ ಭಾಷೆಯಿದೆ. ಅಲ್ಲಲ್ಲಿ ಒಂದೆರಡು ಪದಗಳನ್ನು ಸೇರಿಸಿರುವುದೂ ಉಂಟು. ಮೂಲದ ಒಟ್ಟು ಆಶಯಕ್ಕೆ ಧಕ್ಕೆಯಾಗದಂತೆ ಸಾಧ್ಯವಿರುವ ಎಲ್ಲ ಸ್ವಾತಂತ್ರ್ಯವನ್ನೂ ಬಳಸಿದ್ದೇನೆ. ಮೂಲದಲ್ಲಿ ಅನೇಕ ಪದ್ಯಗಳಿವೆ. ಈ ಅನುವಾದ ಪೂರ್ತಿಯಾಗಿ ಗದ್ಯದಲ್ಲಿದೆ. ಒಂದು ವಸ್ತುವಿನ ಛಾಯೆ ವಸ್ತುವಿನ ಎಲ್ಲ ವಿವರಗಳನ್ನು ಕೊಡದೆಯೂ ಅದರ ಆಕೃತಿಯನ್ನು ಹಿಡಿದಿಡುವಂತೆ ಈ ಅನುವಾದವಿದೆ.

ಲಕ್ಷ್ಮೀನಾರಾಯಣ ಭಟ್ಟ

# ಪಾತ್ರಗಳು

## ಗಂಡಸರು

**ಚಾರುದತ್ತ :** ಅವಂತಿಪುರದ ವರ್ತಕ ; ಹಿಂದೆ ಶ್ರೀಮಂತನಾಗಿದ್ದವನು ; ನಾಟಕದ ನಾಯಕ.

**ಮೈತ್ರೇಯ (ವಿದೂಷಕ) :** ಚಾರುದತ್ತನ ಸ್ನೇಹಿತ.

**ರೋಹಸೇನ (ಹುಡುಗ) :** ಚಾರುದತ್ತನ ಮಗ.

**ವರ್ಧಮಾನಕ :** ಚಾರುದತ್ತನ ಚೇಟ (ಸೇವಕ).

**ಸಂವಾಹಕ :** ಚಾರುದತ್ತನ ಸೇವಕ ; ಜೂಜುಗಾರ ; ಕಡೆಯಲ್ಲಿ ಬೌದ್ಧಸನ್ಯಾಸಿ.

**ಶಕಾರ :** ರಾಜನಾದ ಪಾಲಕನ ಭಾವಮೈದುನ ; ಚಾರುದತ್ತನ ವಿರೋಧಿ.

**ವಿಟ :** ಶಕಾರನ ಸ್ನೇಹಿತ.

**ಸ್ಥಾವರಕ :** ಶಕಾರನ ಸೇವಕ (ಚೇಟ).

**ಮಾಥುರ :** ಜೂಜಿನ ಅಧಿಕಾರಿ.

**ಸಭಿಕ :** ಒಬ್ಬ ಜೂಜುಗಾರ.

**ಪಾಲಕ :** ಉಜ್ಜಯಿನಿಯ ರಾಜ. (ರಂಗಭೂಮಿಯ ಮೇಲೆ ಬರುವುದಿಲ್ಲ).

**ಆರ್ಯಕ :** ಪಾಲಕನನ್ನು ಕೊಂದು ಉಜ್ಜಯಿನಿಯ ರಾಜನಾಗುವವನು.

**ಶರ್ವಿಳಕ :** ಆರ್ಯಕನ ಆಪ್ತಮಿತ್ರ. ಮದನಿಕೆಯ ಪ್ರಿಯಕರ.

**ವೀರಕ, ಚಂದನಕ :** ನಗರ ರಕ್ಷಕರ ಮುಖ್ಯಸ್ಥರು.

**ನ್ಯಾಯಾಧೀಶ**

**ಲೇಖಕ :** ನ್ಯಾಯಾಲಯದ ಒಬ್ಬ ಅಧಿಕಾರಿ.

**ಶೋಧನಕ :** ನ್ಯಾಯಾಲಯದ ಒಬ್ಬ ಸೇವಕ.

**ಕುಂಭೀಲಕ :** ವಸಂತಸೇನೆಯ ಮನೆಯಾಳು.

**ಅಹಿಂತಕ, ಗೋಹ :** ಚಂಡಾಲರು.

ಇವರಲ್ಲದೆ ಸೂತ್ರಧಾರ, ಚೂರ್ಣವೃದ್ಧ, ರೇಭಿಲ, ಕಾವಲುಗಾರರು, ಇತ್ಯಾದಿ.

## ಹೆಂಗಸರು

**ವಸಂತಸೇನೆ :** ನಾಯಿಕೆ, ಚಾರುದತ್ತನ ಗೆಳತಿ.

**ಮದನಿಕೆ :** ವಸಂತಸೇನೆಯ ದಾಸಿ ; ಶರ್ವಿಳಕನ ಗೆಳತಿ.

**ಚೇಟಿ :** ವಸಂತಸೇನೆಯ ದಾಸಿ.

**ಮುದುಕಿ :** ವಸಂತಸೇನೆಯ ತಾಯಿ.

**ಧೂತಾದೇವಿ :** ಚಾರುದತ್ತನ ಹೆಂಡತಿ.

**ರದನಿಕೆ :** ಚಾರುದತ್ತನ ದಾಸಿ.

**ನಟಿ :** ಸೂತ್ರಧಾರನ ಹೆಂಡತಿ.

## ಪ್ರಸ್ತಾವನೆ

**ಸೂತ್ರಧಾರ** (ಸಭಿಕರನ್ನು ಕುರಿತು) ಮಾನ್ಯರೆ, ನಿಮಗೂ ನಾಟಕಕ್ಕೂ ನಡುವೆ ನಾನು ಹೆಚ್ಚು ಹೊತ್ತು ನಿಲ್ಲೋದಿಲ್ಲ. ನನ್ನ ವಿಜ್ಞಾಪನೆ ಇಷ್ಟೆ. ಇವತ್ತು ನಾವು ಮೃಚ್ಛಕಟಿಕ ಎಂಬ ನಾಟಕ ಆಡೋ ಸಿದ್ಧತೆ ನಡೆಸಿದೇವೆ. ಇದನ್ನು ಬರೆದ ಕವಿ ಶೂದ್ರಕ. ಮಹಾ ಪ್ರತಿಭಾವಂತ. ಪಂಡಿತ; ಅಶ್ವಮೇಧಯಾಗ ಮಾಡಿ ನೂರು ವರ್ಷ ಬಾಳಿದವನು. ಅವನ ಈ ನಾಟಕದ ವಸ್ತು ಏನು ಗೊತ್ತೆ?

ಅವಂತಿಪುರದ ಯುವಕ ವಿಪ್ರ
ಬಡವ ಚಾರುದತ್ತನು
ನಗರದಲ್ಲೆ ಶ್ರೇಷ್ಠನು.
ಅವನಿಗೆ ಹೃದಯವನ್ನ ಧಾರೆ-
ಯೆರೆದ ಮಹಾ ಚೆಲುವೆಯು
ಸಿರಿ ವಸಂತಸೇನೆಯು.
ಅವರ ಒಲುಮೆ ಪ್ರೇಮಿಗಳಿಗೆ
ಎಂದೆಂದಿಗೂ ಮಾದರಿ
ಗುಣಶೀಲಕೆ ಸೋದರಿ
ನಡುವೆ ನಿಂತ ಖಳರ ನೀತಿ
ವಿಧಿಗೆ ಪ್ರೀತಿ. ಚಾಲಕ
—ಕೃತಿಯಿದಕ್ಕೆ ಶೂದ್ರಕ.

ನಾನೊಬ್ಬ ಶುದ್ಧ ತಕ್ಕಡೀನೇ ನಿಜ. ಹಾಡಿದರೆ ಹೊಟ್ಟೆ ತುಂಬುತ್ತದೆಯೆ? ವಿಪರೀತ ಹಸಿವಾಗ್ತಿದೆ. ಒಂದಿಷ್ಟು ತಂಗಳನ್ನವಾದರೂ ಮಿಕ್ಕಿದ್ದರೆ ಅದನ್ನೇ ಮುಗಿಸಿ ಬರ್ತೇನೆ. (ರಂಗದ ಬದಿಗೆ ಹೋಗಿ) ಲೇ, ಏನು ಮಾಡ್ತಿದೀಯೆ ಒಳಗೆ? (ಮತ್ತೆ ರಂಗದ ನಡುವೆ ಬಂದು) ಏನಿದು? ನಮ್ಮ ಮನೆ ಮುಂದೆ ಕಲಗಚ್ಚು, ಗಂಜಿ ಎಲ್ಲ ಕಾಲುವೆ ಹಾಗೆ ಹರೀತಾ ಇದೆಯಲ್ಲ? ಭಾರಿ ಅಡಿಗೆಯ ಸಿದ್ಧತೆ ನಡೀತಾ ಇರೋ ಹಾಗಿದೆ! ಯಾಕಿದ್ದೀತು ಇಷ್ಟು ಸಂಭ್ರಮ? ಅದೂ ನನ್ನ ಮನೆಯಲ್ಲಿ ನನಗೇ ಗೊತ್ತಿಲ್ಲದೆ!

**ನಟಿ** (ಬಂದು) ಕರೆದೆಯಾ ಆರ್ಯಪುತ್ರ?

**ಸೂತ್ರಧಾರ** ಹೌದೇ ಮಹರಾಯ್ತಿ, ಹಾಡಿ ಹಾಡಿ ನನ್ನ ಗಂಟಲೆಲ್ಲ ಒಣಗಿಹೋಯ್ತು. ಬೇಸಿಗೆ ದಿನದ ತಾವರೆ ಬೀಜದ ಹಾಗೆ ನನ್ನ ಅಂಗಾಂಗವೆಲ್ಲ ಬತ್ತಿಹೋಗಿದೆ. ಹೊಟ್ಟೆ, ತಾಳ ಹಾಕ್ತಿದೆ. ತಿನ್ನೋದಕ್ಕೆ ಏನಾದ್ರೂ ಇದೆಯೇನೆ?

ನಟಿ ಏನು ಬೇಕು ಹೇಳಿ ?

ಸೂತ್ರಧಾರ ಏನೇನಿದೆ ಅಂತ ಹೇಳು.

ನಟಿ ಎಲ್ಲ ಇದೆ. ಅನ್ನ, ತುಪ್ಪ, ಮೊಸರು, ಮೇಲೋಗರ, ಉಂಡೆ, ರಸಾಯನ ಎಲ್ಲ.

ಸೂತ್ರಧಾರ ಏನೆಂದೆ ? ಇದೆಲ್ಲ ನಮ್ಮೊಬ್ಬರ ಮನೆಯಲ್ಲೇ ಇದೆಯೆ ? ಅಥವಾ ತಮಾಷೆ ಮಾಡ್ತಿದೀಯಾ ?

ನಟಿ (ಸ್ವಗತ) ಸ್ವಲ್ಪ ತಮಾಷೆ ತಾನೆ ಯಾಕೆ ಮಾಡಬಾರದು ? ಗಂಡಸರಿಗೆ ಹೊಟ್ಟೆ ಹಸಿದಾಗ ಕೋಪ ವಿಪರೀತ ತಾನೆ ? ಸ್ವಲ್ಪ ಕೆಣಕಿ ನೋಡ್ತೇನೆ. (ಪ್ರಕಾಶ) ಇಲ್ಲ, ಖಂಡಿತ ಇದೆ. ಮನೇಲಲ್ಲ, ಅಂಗಡಿಯಲ್ಲಿ.

ಸೂತ್ರಧಾರ ಅಯ್ಯೋ ನೀಚ ಹೆಣ್ಣೆ ! ನನ್ನನ್ನು ಒಂದು ತೃಣದ ಲೆಕ್ಕಕ್ಕೂ ಇಡದೆ ಹೀಗೆ ಗೋಳಾಡಿಸ್ತೀಯಲ್ಲ. ನೀರು ಎತ್ತೋ ಗಳುವಿನ ಹಾಗೆ ನನ್ನನ್ನು ಅಷ್ಟೆತ್ತರ ಎತ್ತಿ ಕೆಳಕ್ಕೆ ಹಾಕಿಬಿಟ್ಟೆ. ತಕ್ಕದ್ದು ಅನುಭವಿಸ್ತೀಯೆ, ತಾಳು.

ನಟಿ ತಪ್ಪಾಯ್ತು ಆರ್ಯ, ಕ್ಷಮಿಸು. ತಿಳಿಯದೆ ಹಾಸ್ಯಮಾಡಿದೆ.

ಸೂತ್ರಧಾರ ಹೋಗಲಿ. ಇದೇನು ಇಲ್ಲಿ ನಡೀತಿರೋ ಸಿದ್ಧತೆ ? ಒಬ್ಬಳು ಗಂಧ ತೇಯ್ತಿದಾಳೆ, ಇನ್ನೊಬ್ಬಳು ಹೂವು ಕಟ್ತಿದಾಳೆ. ನೆಲದಲ್ಲೆಲ್ಲ ರಂಗವಲ್ಲಿಯ ಚಿತ್ರ. ಇದೆಲ್ಲ ಏನು ?

ನಟಿ ಇವತ್ತು ಒಂದು ಉಪವಾಸವ್ರತ ನಡೆಸ್ತಿದೇನೆ.

ಸೂತ್ರಧಾರ ವ್ರತ ! ಯಾವ ವ್ರತ ? ಏನು ಹೆಸರು ?

ನಟಿ ‘ ಅಭಿರೂಪಪತಿ ’ ಅಂತ. ಸುಂದರನಾದ ಪತಿ ಸಿಗಲಿ ಅಂತ ಮಾಡುವ ವ್ರತ.

ಸೂತ್ರಧಾರ ಇಲ್ಲೋ, ಪರಲೋಕದಲ್ಲೋ ?

ನಟಿ ಪರಲೋಕದಲ್ಲಿ.

ಸೂತ್ರಧಾರ ಭಲೆ ! ಇದು ಬೇಕಾದರೆ ಸರಿ. (ಸಭೆಯನ್ನು ನೋಡಿ) ನೋಡಿದಿರಾ ? ನಮ್ಮ ಮನೆ ಅನ್ನ ಖರ್ಚುಮಾಡಿ ಪರಲೋಕದ ಪತಿಯನ್ನು ಹುಡುಕೋ ಹೆಂಗಸರನ್ನು ? ಹೇಗಿದೆ ಕಾಲ ?

ನಟಿ ಸಮಾಧಾನ ಮಾಡಿಕೊಳ್ಳಿ. ಬೇರೆ ಗಂಡನನ್ನು ಹುಡುಕ್ತಿಲ್ಲ. ಜನ್ಮಜನ್ಮಕ್ಕೂ ನೀವೇ ಪತಿ ಆಗಬೇಕು ಅಂತ ಕೋರಿ ಈ ವ್ರತ ಮಾಡ್ತಿದೇನೆ. ತಿಳೀತೆ ?

ಸೂತ್ರಧಾರ ನಿನಗೆ ಈ ವ್ರತ ತಿಳಿಸಿಕೊಟ್ಟವರು ಯಾರು ?

ನಟಿ ನಿಮ್ಮ ಆಪ್ತ ಸ್ನೇಹಿತ ಚೂರ್ಣವೃದ್ಧ ಇಲ್ಲವೆ ? ಆತ.

ಸೂತ್ರಧಾರ ಎಲಾ, ನೀಚ ! ನಮ್ಮ ಪಾಲಕ ಮಹಾರಾಜ ನಿನ್ನನ್ನು ಬಿಗಿ ಶಿಕ್ಷೆ ಕೊಡೋದನ್ನು ನಾನು ಯಾವಾಗ ನೋಡ್ತೇನೋ !

**ನಟಿ** ಅಲ್ಲ, ಯಾಕೆ ಇಷ್ಟು ಕೋಪ ನಿಮಗೆ? ನಿಮಗಾಗೇ ಈ ವ್ರತ ಮಾಡ್ತಿರೋದು (ಹತ್ತಿರ ಬಂದು ಭುಜದ ಮೇಲೆ ಅಕ್ಕರೆಯಿಂದ ಕೈಯಿಡುವಳು).

**ಸೂತ್ರಧಾರ** ಸರಿ, ಹೇಳು. ಈ ವ್ರತವನ್ನು ಯಾರಿಂದ ಮಾಡಿಸಬೇಕು ?

**ನಟಿ** ತಕ್ಕ ಬ್ರಾಹ್ಮಣನಿಂದ.

**ಸೂತ್ರಧಾರ** ಸರಿ, ನೀನು ಹೋಗು. ನಾನು ಹೋಗಿ ಬ್ರಾಹ್ಮಣನನ್ನು ಕರಕೊಂಡು ಬರ್ತೇನೆ.

**ನಟಿ** ಆಗಲಿ, ಬೇಗ ಬನ್ನಿ. (ಹೋಗುವಳು)

**ಸೂತ್ರಧಾರ** ಇದೇ ಕಷ್ಟ. ಈ ಉಜ್ಜಯಿನಿಯಲ್ಲಿ ಇರುವ ಜನವೆಲ್ಲ ಸಾಮಾನ್ಯವಾಗಿ ಶ್ರೀಮಂತರೇ. ನಮಗೆ ಯೋಗ್ಯವಾದ ಬ್ರಾಹ್ಮಣನನ್ನು ಎಲ್ಲಿಂದ ತರಲಿ ? (ನೋಡಿ) ಓಹೋ ! ಸರಿಹೋಯ್ತು. ಚಾರುದತ್ತನ ಮಿತ್ರ ಮೈತ್ರೇಯ ಈ ಕಡೆಯೇ ಬರ್‍ತಿದಾನೆ. ಅವನಿಗಿಂತ ಯೋಗ್ಯ ಯಾರಿದಾರೆ ಈ ಕೆಲಸಕ್ಕೆ ? (ಮುಂದೆ ಹೋಗಿ ರಂಗದ ಬದಿಯನ್ನು ನೋಡಿ) ಅಯ್ಯಾ, ಮೈತ್ರೇಯ ! ಇವತ್ತು ನಮ್ಮ ಮನೆಗೆ ಭೋಜನಕ್ಕೆ ದಯಮಾಡಿಸಪ್ಪ.

**ವಿದೂಷಕ** (ತೆರೆಯಲ್ಲಿ) ಅಯ್ಯಾ, ನಾನು ಯಾವುದೋ ರಗಳೆಯಲ್ಲಿದೇನೆ. ಬರಲಾರೆ. ಬೇರೆ ಯಾರಿಗಾದರೂ ಹೇಳಿಬಿಡು.

**ಸೂತ್ರಧಾರ** ಅಲ್ಲವಯ್ಯ, ನಮ್ಮ ಮನೆಯಲ್ಲಿ ಒಳ್ಳೆಯ ಭೋಜನವಾಗುತ್ತೆ. ದಕ್ಷಿಣೆ ಸಹ ಸಿಗುತ್ತೆ.

**ವಿದೂಷಕ** (ತೆರೆಯಲ್ಲಿ) ನಾನು ಬರೋದಿಲ್ಲ ಅಂತ ಒಂದು ಸಲ ಹೇಳಿದೆನಲ್ಲ ? ಯಾಕೆ ನಿರ್ಬಂಧ ಮಾಡ್ತೀಯೆ ?

**ಸೂತ್ರಧಾರ** ಸರಿ. ಇವನು ಯಾಕೋ ನನ್ನ ಮಾತಿಗೆ ಬೆಲೆ ಕೊಡಲಿಲ್ಲ. ಹೋಗಲಿ, ಬೇರೆ ಯಾರನ್ನಾದರೂ ಕರೀತೇನೆ. (ಹೋಗುವನು)

* * * *

## ಒಂದನೆಯ ಅಂಕ

**ಮೈತ್ರೇಯ** ನಾನು ಬರೋದಿಲ್ಲ, ಬೇರೆ ಯಾರನ್ನಾದರೂ ಕರೀರಿ. (ಮುಂದೆ ನೋಡಿ) ಅಯ್ಯೋ ದೇವರೆ ! ಸಿಟ್ಟಿನಲ್ಲಿ ಏನು ಹೇಳಿಬಿಟ್ಟೆ ! ಈಗ ಯಾರಾದರೂ ಕರೆದು ಅನ್ನ ಹಾಕಿದರೆ ತಾನೇ ನನಗೆ ಊಟ ? ಬಡವನ ಸಿಟ್ಟು, ಹೊಟ್ಟೆಗೆ ಮೂಲ ಅಂತ ! ಸಿಟ್ಟುಮಾಡಿ ಸಿಕ್ಕ ಊಟ ತಪ್ಪಿಸಿಕೊಂಡೆನಲ್ಲ ! ಚಾರುದತ್ತ ಶ್ರೀಮಂತನಾಗಿರುವಾಗ ನಾನು ಹೀಗೆ ಹೇಳಿದರೆ ನಡೀತಿತ್ತು. ಆಹ ! ಏನು ದಿನಗಳಪ್ಪ ಅವು ? ನೆನೆದರೆ ಜೊಲ್ಲು ಸುರಿಯುತ್ತೆ. ಆಗ ಅವನ ಮನೆಯಲ್ಲಿ ಹೊಟ್ಟೆ ಬಿರಿಯ ಮೃಷ್ಟಾನ್ನ ಉಂಡು ಬೀದಿ ಬೀದಿ ಸುತ್ತುತ್ತಿದ್ದೆ. ತೊಟ್ಟೀಲಿ

ಹಾಯಾಗಿ ಮಲಗಿ ತಿಂದದ್ದನ್ನೆಲ್ಲ ಮೆಲುಕು ಹಾಕ್ತಿದ್ದೆ. ರಸ್ತೇಲಿ ಗೂಳಿ ಹಾಗೆ ನಾನು ಲಕ್ಷ್ಯ ಇಲ್ಲದೆ ತಿರುಗ್ತಾ ಇದ್ರೆ ಜನ ಎಲ್ಲ 'ಅಹ ಮೈತ್ರೇಯ' 'ಅಹ ಮೈತ್ರೇಯ' 'ಮಹೋದರ' 'ಮಹಾಭವಿ' ಅಂತ ಮಾತಾಡಿಕೊಳ್ತಿದ್ರು. ಈಗ ಆ ಚಾರುದತ್ತನಿಗೆ ಬಡತನ ಬಂದುಹೋಯ್ತು. ನಾನೋ ಊಟಕ್ಕೆ ಎಲ್ಲೆಲ್ಲೋ ಅಲೆದು ರಾತ್ರಿ ಮಲಗೋದಕ್ಕೆ ಮಾತ್ರ ಚಾರುದತ್ತನ ಮನೆಗೆ ಬರ್ತಿದೇನೆ. ಚಾರುದತ್ತನಿಗೆ ಕೊಡು ಅಂತ ತಿಳಿಸಿ, ಚೂರ್ಣವೃದ್ಧ ಈ ಉತ್ತರೀಯ ಕೊಟ್ಟಿದಾನೆ. (ಅದನ್ನು ಮೂಸಿ) ಏನು ಪರಿಮಳ! ಜಾಜಿ ಹೂವಿನ ಪರಿಮಳ ಕಟ್ಟಿದ್ದಾನೆ ಇದಕ್ಕೆ. ಅಗೋ, ಚಾರುದತ್ತ ಪೂಜೆ ಮುಗಿಸಿ ಈ ಕಡೆಯೇ ಬರ್ತಿದಾನೆ.

(ಚಾರುದತ್ತನ ಪ್ರವೇಶ. ಜೊತೆಗೆ ರದನಿಕೆ)

ವಿದೂಷಕ (ಹತ್ತಿರ ಬಂದು) ಅಯ್ಯಾ ಚಾರುದತ್ತ, ಚೆನ್ನಾಗಿದೀಯೇನಯ್ಯ ?

ಚಾರುದತ್ತ ಬಾ ಮೈತ್ರೇಯ. ನೀನೊಬ್ಬ ಸದಾಕಾಲದಲ್ಲೂ ಜೊತೆಗೆ ಇರೋ ಗೆಳೆಯ ಬಾ. ಕೂತುಕೊ.

ವಿದೂಷಕ (ಕುಳಿತುಕೊಂಡು) ಅಯ್ಯಾ ಚಾರುದತ್ತ, ನಿನ್ನ ಸ್ನೇಹಿತ ಚೂರ್ಣವೃದ್ಧ ಇಲ್ಲವೆ. ಅವನು ಈ ಪರಿಮಳದ ವಸ್ತ್ರವನ್ನು ನಿನಗೆ ಕೊಡು ಅಂತ ಕೊಟ್ಟಿದಾನೆ. ತಗೊ. (ಕೊಡುತ್ತಾನೆ)
(ಚಾರುದತ್ತ ತೆಗೆದುಕೊಂಡು ಏನೋ ಯೋಚಿಸುತ್ತ ನಿಲ್ಲುವನು)
ಏನಪ್ಪಾ ಚಾರುದತ್ತ, ಇಷ್ಟೊಂದು ಯೋಚನೆ !

ಚಾರುದತ್ತ ಮೈತ್ರೇಯ, ಮನುಷ್ಯರಿಗೆ ದುಃಖ ಬರೋದಾದರೆ ಮೊದಲೇ ಬರಬೇಕು. ಕತ್ತಲೆಯಲ್ಲಿ ದೀಪ ಬಂದ ಹಾಗೆ ಅನಂತರ ಸುಖ ಬರಬೇಕು. ಮೊದಲು ಒಳ್ಳೆಯ ದಿನಗಳು ಬಂದು ಆ ಮೇಲೆ ಬಡತನ ಮಾತ್ರ ಬರಬಾರದು. ಹಾಗೇನಾದರೂ ಆಯಿತೋ ಆ ಮನುಷ್ಯ ಇದ್ದೂ ಸತ್ತ ಹಾಗೆ ನೋಡು.

ವಿದೂಷಕ ಅಯ್ಯಾ ಚಾರುದತ್ತ, ಸಾವು, ಬಡತನ–ಎರಡರಲ್ಲಿ ಯಾವುದು ಲೇಸು ಅಂತ ನಿನ್ನ ಅಭಿಪ್ರಾಯ ?

ಚಾರುದತ್ತ ಸಾವೇ ಲೇಸು. ಸಾವು ತರೋ ನೋವು ಬಹಳ ಸ್ವಲ್ಪ. ಆದರೆ ದಾರಿದ್ರ್ಯ ತರೋ ದುಃಖಕ್ಕೆ ಕೊನೆಯೇ ಇಲ್ಲ.

ವಿದೂಷಕ ಚಾರುದತ್ತ, ಅಷ್ಟೊಂದು ದುಃಖಪಡಬೇಡ. ನಿನ್ನ ಬಡತನ ನಿನ್ನ ಔದಾರ್ಯದಿಂದ ಬಂದದ್ದು. ಬೇರೆಯವರ ಸಲುವಾಗಿ ನಿನ್ನ ಧನ ವೆಚ್ಚಮಾಡಿ ಉಂಟಾದದ್ದು. ದೇವತೆಗಳಿಗೆ ಅಮೃತ ಹಂಚಿ ಚಂದ್ರ ಕ್ಷೀಣಿಸಿ ಹೋಗ್ತಾನೆ ಅಂತಾರಲ್ಲ, ಹಾಗೆ. ಆ ನಷ್ಟ ಅವನಿಗೊಂದು ಶೋಭೆ. ನಿನ್ನ ಬಡತನ ಕೂಡ ನಿನಗೆ ಒಂದು ಶೋಭೆಯೇ.

ಚಾರುದತ್ತ ಸಂಪತ್ತು ಹೋದದ್ದಕ್ಕೆ ನನಗೆ ದುಃಖವಿಲ್ಲ ಮೈತ್ರೇಯ. ಆದರೆ ನಾನು ಬಡವನಾದೆ ಅಂತ ಅತಿಥಿಗಳು ಮನೆಗೆ ಬರದೆ ಹೋಗ್ತಾರಲ್ಲ. ಅದಕ್ಕೆ ದುಃಖವಾಗುತ್ತೆ.

ವಿದೂಷಕ ಈ ಹಾಳು ದುಡ್ಡೋ, ಛಿ! ಖರ್ಚಾಗದ ಕಡೆಯೇ ಹೋಗಿ ಸೇರುತ್ತೆ.

ಚಾರುದತ್ತ ಹೋಗಲಿ ಬಿಡು, ನಾನು ಮನೆದೇವರಿಗೆ ಪೂಜೆ ಮುಗಿಸಿದ್ದಾಯಿತು. ನೀನು ಹೊರಭಾಗದಲ್ಲಿ ಇರೋ ವಿಗ್ರಹಗಳಿಗೆ ಪೂಜೆ ಮಾಡಿ ಬಾ.

ಮೈತ್ರೇಯ ಉಹು, ನನಗೆ ಇಷ್ಟ ಇಲ್ಲ.

ಚಾರುದತ್ತ ಯಾಕೆ ಮೈತ್ರೇಯ ?

ಮೈತ್ರೇಯ ಯಾಕೆ ಮಾಡಬೇಕು ಹೇಳು ? ನೀನು ಇಷ್ಟೆಲ್ಲ ದೇವರು ದಿಂಡರು ಅಂತ ಮಾಡಿದೆ. ನಿನಗೆ ಬಂದ ಸ್ಥಿತಿ ನೋಡು. ಇದನ್ನು ನೋಡಿದ ಮೇಲೆ ದೇವರು, ಪೂಜೆ—ಇವೆಲ್ಲ ಅರ್ಥವಿಲ್ಲದ್ದು ಅನ್ನಿಸೋದಿಲ್ವೆ ?

ಚಾರುದತ್ತ ಛೆ ಛೆ, ಎಲ್ಲಾದರೂ ಉಂಟೆ ? ಫಲ ಯೋಚಿಸಿ ಪೂಜೆ ಮಾಡ್ತಾರೆಯೇ ? ಬಾ ಹೋಗೋಣ. ನೀನು ಆಮೇಲೆ ಪೂಜೆಗೆ ಹೋಗುವಿಯಂತೆ.

## ಸ್ಥಳ—ಬೀದಿ. ಸಮಯ—ರಾತ್ರಿ

ಶಕಾರ (ತೆರೆಯಲ್ಲಿ) ಲೇ ವಸಂತಸೇನೇ !

(ವಸಂತಸೇನೆ, ವಿಟ, ಶಕಾರ, ಚೇಟರ ಪ್ರವೇಶ)

ವಿಟ ಎಲೆ ಹುಡುಗಿ ವಸಂತಸೇನೆ ನಿಲ್ಲು. ಯಾಕೆ ಓಡಿ ದಣೀತಿದೀಯಂ ? ಅಟ್ಟಿಬರೋ ಬೇಡನನ್ನು ಕಂಡ ಜಿಂಕೆಯ ಹಾಗೆ ಹೋಗ್ತಿದೀಯಲ್ಲ. ನಿಲ್ಲು.

ಚೇಟ ಆರ್ಯೆ ಯಾಕೆ ಹಾಗೆ ಓಡ್ತೀಯೆ ನಿಲ್ಲು. ಬೇಸಿಗೇಲಿ ಬೆದರಿದ ನವಿಲಿನ ಹಾಗೆ ನೀನು ಹೋಗ್ತಾ ಇದ್ರೆ ನಮ್ಮ ಯಜಮಾನ ಶಕಾರ ಕಾಡಿನಲ್ಲಿ ಹೋಗೋ ನಾಯಿಮರಿ ಹಾಗೆ ನಿನ್ನ ಹಿಂದೇ ಬರ್ತಿದಾರೆ.

ಶಕಾರ ಲೇ ವಸಂತಸೇನೆ, ಒಡವೆಯ ಶಬ್ದ ಮಾಡ್ತ ರಾಮನಿಗೆ ಹೆದರಿದ ದ್ರೌಪದಿಯ ಹಾಗೆ ಓಡಬೇಡ. ಓಡಿದರೆ ಬಿಡ್ತೀನಾ ? ವಿಶ್ವಾವಸುವಿನ ತಂಗಿ ಸುಭದ್ರೇನ ಹನುಮಂತ ಹಾರಿಸಿಕೊಂಡು ಹೋಗಲಿಲ್ವೆ ? ಹಾಗೆ ನಿನ್ನನ್ನು ಹಾರಿಸಿ ಕೊಂಡು ಹೋದರೇ ನಾನು ಶಕಾರ !

ವಸಂತಸೇನೆ ಪಲ್ಲವಿಕೆ, ಪಲ್ಲವಿಕೆ, ಏ ಮಾಧವಿಕೆ.

ಶಕಾರ ಛೆ ಛೆ, ನಾವು ಮನುಷ್ಯರು.

ವಿಟ ಅಯ್ಯೋ ಪೆದ್ದ, ಪಲ್ಲವಿಕೆ ಅಂದರೆ ಚಿಗುರು ಅಂತ, ಮಾಧವಿಕೆ ಅಂದರೆ ಬಳ್ಳಿ ಅಂತ ತಿಳಿದಿಯೇನೋ. ಅವಳು ತನ್ನ ಗೆಳತಿಯರನ್ನು ಕರೀತಿದಾಳೆ.

ಶಕಾರ ಓಹೋ ! ಹೆಂಗಸರನ್ನು ಕರೀತಿದಾಳೋ ?

ವಿಟ ಇನ್ನೇನು ಅಂತಿದ್ದೆ ?

ಶಕಾರ — ಬರಲಿ ಬಿಡು. ನಾನು ಹಾಗೆಲ್ಲ ಹೆದರೋ ಪಿಂಡವೇ ಅಲ್ಲ. ನೋಡುವೆಯಂತೆ ನನ್ನ ಶಕ್ತಿ. ನೂರು ಜನ ಹೆಂಗಸರು ಬಂದರೂ ಈ ಕತ್ತಿಯಿಂದ ಹೊಡೆದು ಹಾಕ್ತೀನಿ ! ತಿಳಕೊ !

ವಸಂತಸೇನೆ — ಅಯ್ಯೋ ದೇವರೆ ! ಎಂಥ ಕಷ್ಟ ಬಂತು. ಜೊತೆಗಿದ್ದವರೂ ಎಲ್ಲೋ ತಪ್ಪಿಸಿಕೊಂಡರಲ್ಲ, ಈ ದುಷ್ಟರಿಂದ ಹೇಗೆ ಪಾರಾಗೋದು ?

ಶಕಾರ — ಲೇ ವಸಂತಸೇನೆ ! ಪಲ್ಲವಿಕನೋ, ಮಾಧವಿಕೇನೋ, ಯಾರುಬೇಕೋ ಈಗಲೇ ಕೂಗು, ಯಾರು ನನ್ನ ಕೈಯಿಂದ ನಿನ್ನನ್ನು ಬಿಡಿಸಿಕೊಳ್ತಾರೆ ನೋಡ್ತೀನಿ ಜಮದಗ್ನಿಯ ಮಗ ಭೀಮ ಬೇಕಾದರೂ ಬರಲಿ, ಕುಂತಿಯ ಮಗ ರಾವಣ ಬೇಕಾದರೂ ಬರಲಿ, ದುಶ್ಯಾಸನ ಸೀತೆಯನ್ನು ಎಳಕೊಂಡು ಹೋದಹಾಗೆ ನಿನ್ನ ಮುಡಿ ಹಿಡಿದು ದರದರ ಎಳಕೊಂಡು ಹೋಗ್ತೇನೆ. ಇಗೋ ನಿನ್ನ ತಲೆ ಕೈಗೆ ಸಿಕ್ಕಿದೆ. ನಿಲ್ತೀಯೋ, ತಲೆ ಕತ್ತರಿಸಿಬಿಡಲೋ ?

ವಸಂತಸೇನೆ — ಅಯ್ಯಾ, ನಾನು ಅಬಲೆಯಲ್ಲವೆ ?

ಶಕಾರ — ಅದರಿಂದಲೇ ಪಾಪ ಅಂತ ಕೊಲ್ಲದೆ ಬಿಟ್ಟಿದೇನೆ.

ವಸಂತಸೇನೆ — (ಸ್ವಗತ) ಅಬ್ಬ ! ಇವನ ಸಮಾಧಾನದ ಮಾತು ಸಹ ಎಷ್ಟು ಭಯಂಕರ ! (ಪ್ರಕಾಶ) ನಿನಗೆ ನನ್ನ ಒಡವೆಗಳು ಇಷ್ಟವಾದಂತೆ ತೋರುತ್ತೆ ಅಲ್ಲವೆ ?

ವಿಟ — ಛೆ ಛೆ ! ಉದ್ಯಾನಲತೆಗೆ ಹೂವು ಅಲಂಕಾರವಲ್ಲವೆ ? ಅದನ್ನು ಬಿಡಿಸಬಾರದು, ನಿನ್ನ ಒಡವೆ ನಿನ್ನಲ್ಲೇ ಇರಲಿ.

ಶಕಾರ — ಇಗೊ ನಾನಿದ್ದೇನಲ್ಲ, ದೇವಪುರುಷ, ಮನುಷ್ಯ, ಸಾಕ್ಷಾತ್ ವಾಸುದೇವ, ನನ್ನನ್ನು ವರಿಸು.

ವಸಂತಸೇನೆ — (ಕೋಪದಿಂದ) ಶಾಂತಂ ಪಾಪಂ. ಅಲ್ಲೇ ನಿಲ್ಲು. ಹೊಲಸು ಮಾತು ಆಡಬೇಡ.

ಶಕಾರ — (ಚಪ್ಪಾಳೆ ತಟ್ಟಿ ಸಂತೋಷದಿಂದ ನಗುತ್ತ) ಭಾವ, ಈ ಸೂಳೆಯ ಮಗಳ ಮಾತು ಕೇಳಿದೆಯ ? ಶಾಂತರಾಗಿದೀರಿ, ಬಳಲಿದೀರಿ, ಇಲ್ಲೇ ನಿಲ್ಲಿ, ಅಂತ ಎಷ್ಟು ಪ್ರೀತಿಯಿಂದ ಮಾತಾಡಿಸ್ತಾಳೆ !

ವಿಟ — (ಸ್ವಗತ) ಎಲಾ, ಈ ಮನುಷ್ಯ ಎಂಥ ಹೆಡ್ಡ ! ಅವಳು ಶಾಂತಂ ಅಂದರೆ ಶ್ರಾಂತಂ ಅಂತ ತಿಳೀತಾನಲ್ಲ ! (ಪ್ರಕಾಶ) ವಸಂತಸೇನೆ, ನಿನ್ನ ಮಾತು ವೇಶ್ಯಾಧರ್ಮಕ್ಕೇ ವಿರುದ್ಧ. ವೇಶ್ಯೆ ದಾರಿ ಬದಿಯ ಬಳ್ಳಿಯ ಹಾಗೆ. ಯಾರಾದರೆ ಏನು ? ಹಣ ಕೊಟ್ಟವನನ್ನು ಒಲಿಯೋದೇ ನಿನಗೆ ರೀತಿ.

ವಸಂತಸೇನೆ — ಎಲ್ಲಾದರೂ ಉಂಟೆ ? ಅನುರಾಗಕ್ಕೆ ಗುಣವೇ ಕಾರಣ, ಬಲಾತ್ಕಾರದಿಂದ ಪ್ರೀತಿ ಹುಟ್ಟುತ್ತದೆಯೆ ?

ಶಕಾರ ಭಾವ, ಕಾಮದೇವಾಲಯದ ಉದ್ಯಾನದಿಂದ ಇಲ್ಲಿಯವರೆಗೂ ನಾನು ಇವಳ ಜೊತೆಗೇ ಬಂದೆ. ಆದರೂ ಈ ಕತ್ತೆಯ ಮಗಳಿಗೆ ಆ ದರಿದ್ರ ಚಾರುದತ್ತನ ಮೇಲೇ ಮನಸ್ಸು. ನನ್ನನ್ನು ಹೇಗೆ ಉದಾಸೀನ ಮಾಡ್ತಾಳೆ ನೋಡು? ಆ ದರಿದ್ರನ ಮನೆ ಎಡಗಡೆಗೇ ಇದೆ. ಇವಳು ತಪ್ಪಿಸಿಕೊಂಡು ಅಲ್ಲಿಗೆ ಹೋಗದಂತೆ ನೋಡಿಕೋಬೇಕು, ಎಚ್ಚರವಿರಲಿ!

ವಿಟ (ಸ್ವಗತ) ಅಯ್ಯೋ ಪೆಸ್ಟ! ಗುಟ್ಟಾಗಿಡಬೇಕಾದ್ದನ್ನ ತಾನೇ ರಟ್ಟು ಮಾಡ್ತಿದಾನೆ! ಚಾರುದತ್ತನ ಮನೆ ಎಲ್ಲಿ ಅಂತ ತಿಳೀದೆ ಕತ್ತಲಲ್ಲಿ ಪರದಾಡ್ತ ಇದ್ದ ಆ ಹುಡುಗಿಗೆ ತಾನಾಗಿ ಮನೆ ಗುರುತು ಹೇಳಿಕೊಟ್ಟನಲ್ಲ! ಹೋಗಲಿ, ವಸಂತಸೇನೆ ಚಾರುದತ್ತನನ್ನು ಒಲಿದಿದ್ದರೆ ನ್ಯಾಯವೇ! ರತ್ನ ರತ್ನವನ್ನು ಸೇರಿದರೇ ಶೋಭೆ. ಅವಳು ತಪ್ಪಿಸಿಕೊಳ್ಳಲಿ. ಈ ನೀಚನನ್ನು ಕಟ್ಟಿಕೊಂಡು ಏನು ಫಲ? (ಪ್ರಕಾಶ) ಏನು? ಚಾರುದತ್ತನ ಮನೆ ಎಡಗಡೆ ಎಂದೆಯಾ?

ಶಕಾರ ಹೌದು ಭಾವ.

ವಸಂತಸೇನೆ (ಸ್ವಗತ) ಚಾರುದತ್ತನ ಮನೆ ಎಲ್ಲಿದೆ ಅಂತ ತಿಳೀದೆ ಕಳವಳಪಡ್ತಿದ್ದೆ. ಸದ್ಯ, ದೊಡ್ಡ ಉಪಕಾರ ಮಾಡಿದ!

ಶಕಾರ ಭಾವ, ಕತ್ತಲೆ ದಪ್ಪಗಾಯ್ತು. ಉದ್ದಿನ ರಾಶಿಯಲ್ಲಿ ಬಿದ್ದ ಇದ್ದಲು ಚೂರಿನಂತೆ ವಸಂತಸೇನೆ ಕಣ್ಮರೆಯಾದಳು.

ವಿಟ ಎಲೋ ಬೃಹಸ್ಪತಿ, ಕಣ್ಣಿಗೆ ಕಾಣದ ಮಾತ್ರಕ್ಕೆ ಏನಾಯ್ತು? ಅವಳನ್ನ ಪತ್ತೆ ಮಾಡೋ ಗುರುತು ತಿಳಿಯದೆ?

ಶಕಾರ ಗುರುತು ಅಂದರೆ ಎಂಥದು ಭಾವ!

ವಿಟ ಎಲೋ ಪಂಡಿತ! ಅವಳ ಕಾಲುಗಡಗದ ಶಬ್ದವೋ ಅವಳು ಮುಡಿದ ಹೂವಿನ ವಾಸನೆಯೋ ಗೊತ್ತಾಗಲ್ವೆ?

ಶಕಾರ ವಾಸನೆಯೇನೋ ಕೇಳ್ತಿದೆ. ಆದರೆ ಕತ್ತಲೆ ಬಲವಾಗಿರೋದರಿಂದ ಕಡಗದ ದನಿ ಕಾಣ್ತಾ ಇಲ್ಲ.

ವಿಟ (ಮೆಲ್ಲನೆಯ ದನಿಯಲ್ಲಿ) ವಸಂತಸೇನೆ, ಮೋಡದ ಮಧ್ಯೆ ಮರೆಸಿಕೊಂಡ ಮಿಂಚಿನ ಹಾಗೆ ನೀನು ಈ ಕತ್ತಲಲ್ಲಿ ಮರೆಯಾಗಿ ಸಾಗ್ತಾ ಇದ್ರೂ ನಿನ್ನ ಕಡಗದ ದನಿ, ಹೂವಿನ ಪರಿಮಳ ನಿನ್ನ ಪತ್ತೆ ಕೊಡ್ತಿವೆ. ನನ್ನ ಮಾತು ಕೇಳಿಸ್ತೆ?

ವಸಂತಸೇನೆ (ತನ್ನಲ್ಲಿ) ಕೇಳಿದ್ದೂ ಆಯ್ತು, ಅವನು ತೆಗೆದದ್ದೂ ಆಯ್ತು! (ಒಡವೆ, ಹೂಗಳನ್ನು ಮೈಯಿಂದ ತೆಗೆದು) ಸದ್ಯ! ತಡವರಿಸುತ್ತ ಬಂದದ್ದರಿಂದ ಕೈಗೆ ಬಾಗಿಲು ಸಿಕ್ಕಿತು! ಇದೇನು? ಬಾಗಿಲು ಮುಚ್ಚಿದ ಹಾಗಿದೆಯಲ್ಲ!

| | |
|---|---|
| ಶಕಾರ | ಭಾವ ! ಆ ಮಳ್ಳಿಯನ್ನು ಈಗಲೇ ಹುಡುಕಿ ತೆಗೀತೇನೆ ನೋಡ್ತಿರು. |
| ವಿಟ | ಅಷ್ಟು ಮಾಡು, ನೋಡೋಣ. |
| ಚಾರುದತ್ತ | (ಪ್ರವೇಶಿಸಿ) ಮೈತ್ರೇಯ, ನನ್ನ ಆಹ್ನಿಕ ಮುಗಿಯಿತು. ಹೋಗಿ ಮಾತೃದೇವಗಳಿಗೆ ಪೂಜೆ ಸಲ್ಲಿಸಿ ಬಾ. |
| ವಿದೂಷಕ | ಊಹು. ನಾನು ಹೋಗೋದಿಲ್ಲ. |
| ಚಾರುದತ್ತ | ಕಷ್ಟ ಕಷ್ಟ! ನನ್ನ ಮಾತೆಂದರೆ ಇವನಿಗೂ ಕಾಲುಕಸವಾಯ್ತು. ಬಡತನ ಬಂತು ಅಂದರೆ ಎಲ್ಲ ಉದಾಸೀನ ಮಾಡುವವರೆ ! ಆರನೆಯ ಮಹಾಪಾತಕ ಬಡತನವೇ ನಿಜ. |
| ವಿದೂಷಕ | ಬೇಸರಬೇಡ ಮಿತ್ರ, ಹೋಗ್ತೀನಿ. ಆದರೆ ಈ ರದನಿಕೇನೂ ಜೊತೆಗೆ ಬರಲಿ. ರದನಿಕೆ, ಪೂಜಾಸಾಮಗ್ರಿ ದೀಪ ಎರಡನ್ನೂ ಕೈಗೆ ತಗೊ. ಬಾಗಿಲು ತೆಗೀತೇನೆ. |
| ವಸಂತಸೇನ | (ಸ್ವಗತ) ನನ್ನ ಪುಣ್ಯ ! ಬಾಗಿಲು ತೆರೀತಾ ಇದೆ. ಒಳಕ್ಕೆ ಹೋಗ್ತೀನಿ. (ರದನಿಕೆ ದೀಪಸಹಿತ ಬರುತ್ತಾಳೆ) ಅಯ್ಯೋ ! ಬೆಳಕು ! ಯಾರೋ ದೀಪ ತರ್‍ತಿದಾರೆ. (ಸೆರಗು ಬೀಸಿ ದೀಪ ಆರಿಸಿ ಮನೆಯ ಒಳಕ್ಕೆ ಸೇರಿಕೊಳ್ಳುತ್ತಾಳೆ,) |
| ವಿದೂಷಕ | ಅಮ್ಮಮ್ಮ ! ಏನು ಗಾಳಿ ! ಬಾಗಿಲು ತೆಗೆದರೆ ದೀಪವೇ ಆರಿಹೋಯ್ತಲ್ಲ ? ರದನಿಕೆ, ನೀನು ಇಲ್ಲೇ ಇರು, ದೀಪ ಹಚ್ಚಿಕೊಂಡು ಬರ್‍ತೇನೆ. |
| ಶಕಾರ | (ವಸಂತಸೇನೆಯನ್ನು ಹುಡುಕುತ್ತ ಬಂದು ವಿಟನನ್ನು ಹಿಡಿದು ಹರ್ಷದಿಂದ) ಭಾವ ಭಾವ ! ಕಡೆಗೂ ಸಿಕ್ಕಿದಳಲ್ಲ ಕಳ್ಳಿ ! |
| ವಿಟ | (ಶಕಾರನ ಹಿಡಿತಕ್ಕೆ ಸಿಕ್ಕಿ ಒದ್ದಾಡುತ್ತಾ) ಅಯ್ಯಾ ಮಹಾನುಭಾವ, ನನ್ನನ್ನು ಹಿಡಕೊಂಡು ವಸಂತಸೇನೆ ಅಂತೀಯಲ್ಲ ! |
| ಶಕಾರ | ಓಹೋ ಇದು ನೀನೋ ! ಹಾಗಾದರೆ ಈ ಕಡೆ ನಿಲ್ಲು. (ಪುನಃ ತಡಕುತ್ತ ಹೋಗಿ) ಈಗ ಭಾವ ! ಸಿಕ್ಕೇಬಿಟ್ಟಳಲ್ಲ ! |
| ಚೇಟ | ಸ್ವಾಮೀ, ಇದು ನಾನು, ಚೇಟ. |
| ಶಕಾರ | ಛಿ ಛಿ, ಲೆಕ್ಕ ತಪ್ಪಾಯ್ತು. ಲೋ ಚೇಟ ನೀನು ಈ ಕಡೆ ನಿಲ್ಲು. ಭಾವ ಆ ಕಡೆ ಇರಲಿ. ಆ ಕಡೆ ಭಾವ; ಈ ಕಡೆ ಚೇಟ, ಭಾವ-ಚೇಟ, ಚೇಟ-ಭಾವ (ಪುನಃ ತಡವರಿಸುತ್ತ ಹೋಗಿ ರದನಿಕೆಯನ್ನು ಹಿಡಿಯುವನು) ಲೋ ಭಾವ, ವಸಂತಸೇನೆ ಕತ್ಲಲ್ಲೀಲಿ ತಪ್ಪಿಸಿಕೊಳ್ತಾ ಇದ್ದಳು. ಚಾಣಕ್ಯ ದ್ರೌಪದಿಯ ಜುಟ್ಟು ಹಿಡಿದ ಹಾಗೆ ಹಿಡಿದು ನಿಲ್ಸಿದೇನೆ ನೋಡು. |
| ರದನಿಕೆ | (ಗಾಬರಿ ದನಿಯಲ್ಲಿ) ಯಾರಿದು ! ನನ್ನನ್ನೇಕೆ ಹಿಡಿದಿದೀರಿ ? |
| ವಿಟ | ಛೆ ! ಇದು ವಸಂತಸೇನೆಯ ದನಿಯಲ್ಲ. ಬೇರೆ ಯಾರೋ ಇರಬೇಕು. |

| | |
|---|---|
| ಶಕಾರ | ನನ್ನನ್ನೇ ಮರಳು ಮಾಡ್ತಾಳಲ್ಲ ಭಾವ ? ಕೆನೆಮೊಸರು ಕುಡಿಯೋದಕ್ಕೆ ಹೊಂಚಿದ ಬೆಕ್ಕಿನ ಹಾಗೆ ದನಿ ಬದಲಾಯಿಸಿಕೊಂಡಿದಾಳೆ ! |
| ವಿದೂಷಕ | (ದೀಪ ಹಿಡಿದು ಬಂದು) ಒಳ್ಳೇ ದೀಪವಾಯ್ತಲ್ಲಪ್ಪ ಇದು ! ವಧ್ಯಸ್ಥಾನಕ್ಕೆ ಬಂದ ಕುರಿಯ ಎದೆಯ ಹಾಗೆ ಪುರುಪುರು ಗುಟ್ಟುತ್ತಲ್ಲ ! (ಹತ್ತಿರ ಬಂದು ರದನಿಕೆಯನ್ನು ನೋಡಿ) ಇದೇನು ರದನಿಕೆ, ಯಾರಿವರು ? ಚಾರುದತ್ತ ಕೈಸೋತ ಅಂತ ಪರಪುರುಷರನ್ನು ಹೀಗೆ ಮನೆಗೆ ಸೇರಿಸೋದೇ ? ಛಿ ! ಇದು ಅನ್ಯಾಯ. |
| ರದನಿಕೆ | ಮೈತ್ರೇಯ, ಇವರು ಯಾರೋ ಗೊತ್ತಿಲ್ಲ. ನನ್ನನ್ನು ಅವಮಾನಿಸೋದಕ್ಕೆ ನೋಡ್ತಿದಾರೆ. |
| ವಿದೂಷಕ | ಹಾಗೋ, ತಾಳು. (ಕೋಪದಿಂದ ಕೈಯಲ್ಲಿರುವ ಕಟ್ಟಿಗೆಯನ್ನು ಎತ್ತಿ) ಎಲೋ ನೀಚ, ತನ್ನ ಮನೇಲಿದ್ದಾಗ ನಾಯಿ ಸಹ ರೋಷಗೊಳ್ಳುತ್ತೆ. ನಾನೋ ಹೇಳಿ ಕೇಳಿ ಬ್ರಾಹ್ಮಣ. ನಮ್ಮ ಅದೃಷ್ಟದ ಹಾಗೆ ವಕ್ರವಾದ ಈ ದೊಣ್ಣೆಯಿಂದ ನಿನ್ನ ತಲೆ ಒಡೆದು ಹಾಕ್ತೀನಿ ಈಗ. |
| ವಿಟ | ಅಯ್ಯಾ ಮಹಾಬ್ರಾಹ್ಮಣ, ಸ್ವಲ್ಪ ತಾಳು. |
| ವಿದೂಷಕ | ಯಾರು ನೀನು ? (ವಿಟನನ್ನು ನೋಡಿ) ಇವನು ನಮಗೆ ಕೆಟ್ಟದು ಮಾಡಿದೋನಲ್ಲ (ಶಕಾರನನ್ನು ನೋಡಿ) ಇವನೇ ಈ ಕೆಲಸ ಮಾಡಿರಬೇಕು. ಲೋ ರಾಜಶ್ಯಾಲಕ, ದುಷ್ಟ, ದುರಾಚಾರಿ, ಚಾರುದತ್ತ ದರಿದ್ರನಾದ ಅಂತ ಮನೆಗೆ ನುಗ್ಗಿ ಅವನ ಜನರನ್ನ ಅವಮಾನಿಸ್ತಿಡೀಯಾ ? |
| ವಿಟ | ಮಹಾಬ್ರಾಹ್ಮಣ, ಕ್ಷಮಿಸು. ನಮಗೆ ಒಲಿದ ಹುಡುಗೀನ ಹುಡುಕ್ತಾ ಇದ್ದೆವು. ಅವಳೇ ಅಂತ ತಿಳಿದು ಇವಳನ್ನ ತಡೆದವು. ತಪ್ಪಾಯಿತು, ಕ್ಷಮಿಸು. ಇದನ್ನು ಚಾರುದತ್ತನಿಗೆ ತಿಳಿಸಬೇಡ. (ಕತ್ತಿ ಕೆಳಗಿಟ್ಟು ಕಾಲಿಗೆ ಬೀಳುತ್ತಾನೆ) |
| ವಿದೂಷಕ | ಹೋಗಲಿ ಬಿಡು. ತಿಳೀದೆ ನಿನ್ನನ್ನು ಬೈದೆ. |
| ಶಕಾರ | ಅಯ್ಯಯ್ಯ ! ಇದೇನು ಭಾವ ? ಯಾಕೆ ಈ ದುಷ್ಟ ಹಂಡುಗನ ಕಾಲಿಗೆ ಬಿದ್ದು ಬೇಡಿಕೊಳ್ತಿ ? |
| ವಿಟ | ಚಾರುದತ್ತನ ಗುಣಕ್ಕೆ ಭಯಪಟ್ಟು. |
| ಶಕಾರ | ಅಂಥ ಗುಣ ಏನಿದೆ ಅವನಲ್ಲಿ ? ಮನೆಗೆ ಹೋದರೆ ತಿನ್ನೋದಕ್ಕೆ ಗತಿಯಿಲ್ಲ. |
| ವಿಟ | ಛೆ ! ಛೆ ! ಅಂಥ ದೊಡ್ಡ ಮನುಷ್ಯನನ್ನು ಜರೀಬೇಡ. ಅವನು ಎಷ್ಟೇ ಮೇಲೇರಿದ್ದ ದಿವಸದಲ್ಲೂ ಒಬ್ಬರನ್ನು ಅವಮಾನಿಸಿದವನಲ್ಲ. ಬೇಸಿಗೇಲಿ ಸರೋವರ ನೀರು ಕೊಟ್ಟು ಎಲ್ಲರನ್ನೂ ತಣಿಸಿ ಬಡವಾಗೊಲ್ವೆ ? ಹಾಗೆ ನಮ್ಮಂಥವರಿಗೆ ತನ್ನ ಸಂಪತ್ತನ್ನೆಲ್ಲ ಖರ್ಚುಮಾಡಿ ಬಡವನಾದ ಉದಾರಿ ಅವನು. |

**ಶಕಾರ** ಯಾರಯ್ಯಾ ಆ ತೊತ್ತಿನ ಮಗ ? ಪಾಂಡುವಿನ ಮಗ ಶ್ವೇತಕೇತುವೋ ? ಇಂದ್ರನಿಂದ ರಾಧೆಗೆ ಹುಟ್ಟಿದ ರಾವಣನೊ ? ಕುಂತಿಯು ಮಗನಾದ ಅಶ್ವತ್ಥಾಮನೊ, ಅಥವಾ ಯಮನ ಮಗನಾದ ಜಟಾಯುವೊ ಯಾರು ? ಒದರು.

**ವಿಟ** ಅಯ್ಯಾ ವಿದ್ವಾಂಸ ! ಅವನು ಅಂಥ ಯಾವನೂ ಅಲ್ಲ. ಗುಣಕ್ಕೆ ಹೆಸರೆತ್ತಿದ ಚಾರುದತ್ತ. ನಾವಿನ್ನು ಹೋಗೋಣ ನಡಿ.

**ಶಕಾರ** ವಸಂತಸೇನೆ ಇಲ್ಲದೆಯೆ ?

**ವಿಟ** ಅವಳು ಆಗಲೇ ಹೊರಟುಹೋದಳಲ್ಲಯ್ಯ !

**ಶಕಾರ** ಇದೇನು ಭಾವ ! ಎಲ್ಲಿ ಹೋದಳು ? ಹೇಗೆ ಹೋದಳು ?

**ವಿಟ** ಕುರುಡನ ದೃಷ್ಟಿಯ ಹಾಗೆ, ರೋಗಿಯ ಆರೋಗ್ಯದ ಹಾಗೆ, ಮೂರ್ಖನ ಬುದ್ಧಿಯ ಹಾಗೆ, ವ್ಯಸನಕ್ಕೆ ಬಿದ್ದ ಹೀನನ ವಿದ್ಯೆಯ ಹಾಗೆ.

**ಶಕಾರ** ವಸಂತಸೇನೆ ಇಲ್ಲದೆ ನಾನು ಬರೋದಿಲ್ಲ.

**ವಿಟ** ಹುಚ್ಚ ! ಮನಸ್ಸಿಲ್ಲದ ಹೆಣ್ಣನ್ನು ಕಟ್ಟಿಕೊಂಡು ಏನು ಪ್ರಯೋಜನ ? ನಡಿ.

**ಶಕಾರ** ನೀನು ಬೇಕಾದರೆ ಹೋಗು ; ನಾನು ಬರೋದಿಲ್ಲ.

**ವಿಟ** ಏನಾದರೂ ಮಾಡಿಕೊ (ಹೋಗುವನು)

**ಶಕಾರ** ಹೋದ, ಹಾಳಾಗಿ ಹೋದ. (ವಿದೂಷಕನ ಹತ್ತಿರ ಬಂದು) ಲೋ ದುಷ್ಟವಟು, ಇಲ್ಲಿ ಕುಕ್ಕರಿಸು.

**ವಿದೂಷಕ** ಕೂರಿಸಿಯೇ ಇದ್ದಾನೆ.

**ಶಕಾರ** ಯಾರು ?

**ವಿದೂಷಕ** ಯಮ.

**ಶಕಾರ** ಹಾಗಾದರೆ ಎದ್ದುಬಿಡು.

**ವಿದೂಷಕ** ಎದ್ದೇ ಏಳ್ತೀನಿ.

**ಶಕಾರ** ಯಾವಾಗ ?

**ವಿದೂಷಕ** ದೈವ ಕಣ್ಣುಬಿಟ್ಟಾಗ.

**ಶಕಾರ** ಹೋಗಲಿ ಅಳು.

**ವಿದೂಷಕ** ಅಳಿಸ್ತಾನೇ ಇದೆಯಲ್ಲ ?

**ಶಕಾರ** ಯಾವುದು ?

**ವಿದೂಷಕ** ಬಡತನ.

**ಶಕಾರ** ಹಾಗಿದ್ದರೆ ನಗು.

**ವಿದೂಷಕ** ನಕ್ಕೇ ನಗ್ತೇನೆ.

**ಶಕಾರ** ಯಾವಾಗ ?

| | |
|---|---|
| ವಿದೂಷಕ | ನಮ್ಮ ಚಾರುದತ್ತನಿಗೆ ತಿರುಗಿ ಐಶ್ವರ್ಯ ಬಂದಾಗ. |
| ಶಕಾರ | ಲೋ ತಲೆಹೋಕ! ನಿಮ್ಮ ಚಾರುದತ್ತನಿಗೆ ಹೇಳು — 'ವಸಂತಸೇನೆ ಅನ್ನೋ ವೇಶ್ಯೆಯರ ಹುಡುಗಿ ನಿನ್ನನ್ನೇ ಪ್ರೀತಿಮಾಡಿ, ನಾನು ಹಿಂಬಾಲಿಸಿ ಬಂದರೂ ಲೆಕ್ಕಿಸದೆ ಇಲ್ಲಿಗೆ ಬಂದಿದಾಳೆ. ಅವಳನ್ನು ಕರೆದುಕೊಂಡು ಬಂದು ನನಗೆ ಒಪ್ಪಿಸಿದರೆ ಸರಿ. ಇಲ್ಲ, ತೊಟ್ಟಿಗೆ ಸಗಣಿ ಸವರಿದ ಕುಂಬಳಕಾಯಿ ಹೇಗೆ ಯಾವತ್ತೂ ಕೆಡೋದಿಲ್ವೋ ಹಾಗೆ ನನಗೆ ನಿನಗೆ ಯಾವತ್ತೂ ಶತ್ರುತ್ವ ಹೋಗೋದಿಲ್ಲ' ಅಂತ. ಅವನಿಗೆ ಇದನ್ನೆಲ್ಲ ಸರಿಯಾಗಿ ತಿಳಿಸು. ಇಲ್ಲದಿದ್ದರೆ ಬಾಗಿಲ ಸಂದಿಗೆ ಸಿಕ್ಕಿದ ಬೇಲದ ಚಿಪ್ಪಿನ ಹಾಗೆ ನಿನ್ನ ತಲೇನ ಒಂದೇ ಏಟಿಗೆ ಚೂರು ಚೂರು ಮಾಡಿಬಿಟ್ಟೇನು! |
| ವಿದೂಷಕ | ಅಯ್ಯಾ ನಿನ್ನ ಕೈಯಲ್ಲಿ ಕತ್ತಿ ಇದೆ ಅಂತ ಬಲ್ಲೆ. ತಲೆ ಹೊಡೆಯೋದರಲ್ಲಿ ನೀನು ಗಟ್ಟಿಗನೇ ಇರಬೇಕು. ಖಂಡಿತ ನಿನ್ನ ಮಾತು ತಿಳಿಸ್ತೇನೆ. |
| ಶಕಾರ | (ಚೇಟನಿಗೆ) ನಡಿ ಹೋಗೋಣ. |
| ಚೇಟ | ಕತ್ತಿಯನ್ನು ನೀವು ತಗೊಳ್ಳಿ. |
| ಶಕಾರ | ಯಾಕೆ? ನಿನ್ನ ಹತ್ತಿರವೇ ಇರಲಿ. |
| ಚೇಟ | ನೀವು ನಮ್ಮ ಸ್ವಾಮಿ ತಾನೆ? ನಿಮ್ಮ ಕೈಯಲ್ಲಿದ್ರೇ ಶೋಭೆ. |
| ಶಕಾರ | ಅದೂ ಸರಿಯೆ. (ಕತ್ತಿಯನ್ನು ತಲೆಕೆಳಗಾಗಿ ಹಿಡಿದುಕೊಂಡು) ಗೋಣಿ ನಾರಿನ ಚೀಲದಲ್ಲಿ ಮಲಗಿರೋ ಈ ಕತ್ತಿಯನ್ನ ಹೆಗಲಿಗೇರಿಸಿಕೊಂಡು, ನಾಯಿ ಅಟ್ಟಿಸಿಕೊಂಡು ಬಂದ ನರಿಯ ಹಾಗೆ ಮನೆಗೆ ಹೋಗ್ತೇನೆ. (ಹೋಗುವನು.) |
| ವಿದೂಷಕ | ರದನಿಕೆ, ಸಮಾಧಾನ ಮಾಡಿಕೊ. ಇದು ನಿನಗಾದ ಅಪಮಾನ ಅಲ್ಲ, ನಮ್ಮ ಚಾರುದತ್ತನಿಗಾದ ಅಪಮಾನ. ಅವನಿಗೆ ಈ ಸಂಗತಿ ಮಾತ್ರ ತಿಳಿಸ್ಬೇಡ. ಮೊದಲೇ ಬಡತನದಿಂದ ನೊಂದಿದಾನೆ. ಇದು ತಿಳಿದರೆ ಇನ್ನಷ್ಟು ಸಂಕಟಪಟ್ಟಾನು. |
| ರದನಿಕೆ | ಆಗಲಿ. ಹೇಳೋದಿಲ್ಲ. |
| ಚಾರುದತ್ತ | (ಮನೆಯೊಳಗೆ ತಲೆ ಬಗ್ಗಿಸಿಕೊಂಡು ಬರುವನು. ಅಲ್ಲೇ ನಿಂತಿರುವ ವಸಂತಸೇನೆಯನ್ನು ರದನಿಕೆ ಎಂದು ಭಾವಿಸಿಕೊಂಡು) ರದನಿಕೆ, ಸಂಜೆಹೊತ್ತು. ಥಂಡಿ ಗಾಳಿ ಬೀಸ್ತಾ ಇದೆ. ರೋಹಸೇನನನ್ನು ಒಳಗೆ ಕರೆದುಕೊಂಡು ಹೋಗು. ಈ ಬಟ್ಟೆ ಹೊದಿಸು. (ತನ್ನ ಉತ್ತರೀಯವನ್ನು ಕೊಡುವನು.) |
| ವಸಂತಸೇನೆ | (ಸ್ವಗತ) ಈತ ನನ್ನನ್ನು ಮನೆಸೇವಕಿ ಅಂತ ತಪ್ಪು ತಿಳಿದು ಹೀಗೆ ಹೇಳ್ತಿರಬೇಕು. (ಉತ್ತರೀಯವನ್ನು ತೆಗೆದುಕೊಳ್ಳುವಳು.) |
| ಚಾರುದತ್ತ | ರೋಹಸೇನನನ್ನು ಒಳಕ್ಕೆ ಕರಕೊಂಡು ಹೋಗು ರದನಿಕೆ. |

| | |
|---|---|
| ವಸಂತಸೇನೆ | (ಸ್ವಗತ) ನಿರ್ಭಾಗ್ಯಳಾದ ನಾನು ನಿಮ್ಮ ಮನೆಯೊಳಕ್ಕೆ ಹೋಗುವಷ್ಟು ಅದೃಷ್ಟವಂತೆಯೆ ? |
| ಚಾರುದತ್ತ | ಯಾಕೆ ಉತ್ತರಕೊಡುವುದಿಲ್ಲ ರದನಿಕೆ ? ಕಷ್ಟ ! ಸಂಪತ್ತು ಕರಗಿದಾಗ ಹತ್ತಿರದವರೂ ದೂರವಾಗ್ತಾರೆ. |
| ವಿದೂಷಕ | (ರದನಿಕೆಯ ಜೊತೆ ಬರುವನು) ಮಿತ್ರ, ರದನಿಕೆ ಅಂತ ಕರೆದೆಯಲ್ಲ, ಇಲ್ಲಿದಾಳೆ. |
| ಚಾರುದತ್ತ | (ಆಶ್ಚರ್ಯದಿಂದ) ಹಾಗಾದರೆ ಅದು ಯಾರು ? ಯಾರೋ ಬೇರೆ ಹೆಂಗಸಿನ ಕೈಗೆ ವಸ್ತ್ರ ಕೊಟ್ಟೆನಲ್ಲ ! |
| ವಸಂತಸೇನೆ | (ಸ್ವಗತ) ಬೇರೆ ಹೆಣ್ಣೇನಲ್ಲ, ನಿನ್ನವಳೇ. |
| ಚಾರುದತ್ತ | ಉತ್ತರೀಯ ಹೊದ್ದ ಇವಳು ಶರತ್ಕಾಲದಲ್ಲಿ ಮೋಡದ ನಡುವೆ ಇರುವ ಚಂದ್ರನ ಹಾಗೆ ಕಾಣ್ತಿದಾಳೆ. (ಸಾವರಿಸಿಕೊಂಡು) ಛೆ ! ಪರಸ್ತ್ರೀಯನ್ನು ನೋಡೋದು ಸರಿಯಲ್ಲ. |
| ವಿದೂಷಕ | ಅಯ್ಯಾ, ಬೇರೆ ಸ್ತ್ರೀ ಅನ್ನೋ ಶಂಕೆ ಬೇಡ. ಇವಳು ವಸಂತಸೇನೆ. |
| ಚಾರುದತ್ತ | ನಿಜವಾಗಿ ? |
| ವಿದೂಷಕ | ಹೌದು, ಚಾರುದತ್ತ. ರಾಜನ ಮೈದುನ ಶಕಾರ ಇದಾನಲ್ಲ, ಅವನು ನಿನಗೆ ಒಂದು ಮಾತು ತಿಳಿಸು ಅಂತ ಹೇಳಿದ. |
| ಚಾರುದತ್ತ | ಏನಂತೆ ? |
| ವಿದೂಷಕ | ' ನಾನು ಎಷ್ಟು ಬಲಾತ್ಕಾರ ಮಾಡಿದರೂ ನನಗೆ ವಶವಾಗದೆ ಈ ವಸಂತಸೇನೆ ನಿಮ್ಮ ಮನೆಗೆ ಬಂದಿದಾಳೆ. ಅವಳನ್ನು ನನಗೆ ಒಪ್ಪಿಸಬೇಕು. ಇಲ್ಲದೆ ಹೋದ್ರೆ ನನಗೂ ನಿನಗೂ ಸಾಯೋತನಕ ವೈರ ತಪ್ಪೋದಿಲ್ಲ ' ಅಂತ ಹೇಳಿದ. |
| ವಸಂತಸೇನೆ | (ಸ್ವಗತ) ಬಲಾತ್ಕಾರ ಮಾಡಿದರೂ ವಶವಾಗಲಿಲ್ಲ ಅನ್ನೋ ಮಾತು ಎಷ್ಟು ಹಿತವಾಗಿದೆ ! |
| ಚಾರುದತ್ತ | ಶಕಾರ ತಾನೆ ? ಅವನೊಬ್ಬ ಮೂರ್ಖ ! (ಸ್ವಗತ) ಎಷ್ಟು ನಿರ್ಮಲ ನಡತೆಯ ಹೆಣ್ಣು ಈಕೆ ! ತಿಳೀದೆ ನಾನು ಒಳಕ್ಕೆ ಹೋಗು ಅಂದರೂ ಹೋಗಲಿಲ್ಲ. ಶಕಾರನ ಕಡೆಯವರು ಇಷ್ಟು ಹಿಂಸೆ ಕೊಟ್ಟರೂ ಆ ಬಗ್ಗೆ ಚಕಾರ ಎತ್ತಲಿಲ್ಲ. |
| ವಸಂತಸೇನೆ | ಆರ್ಯ ನೀನು ನನ್ನನ್ನು ಕಾಪಾಡಿಕೋಬೇಕು. ನನ್ನ ಕೆಲವು ಒಡವೆ ಇಲ್ಲಿದೆ. ಇವು ನಿನ್ನ ಹತ್ತಿರ ಇರಲಿ. ಇಲ್ಲದಿದ್ರೆ ಇವರ ಸಲುವಾಗಿ ಆ ಪಾಪಿಷ್ಟರು ನನ್ನ ಬೆನ್ನುಹತ್ತುತಾರೆ. |
| ಚಾರುದತ್ತ | ಇಂಥ ಅಮೂಲ್ಯ ಒಡವೆ ಇಡೋದಕ್ಕೆ ಇದು ತಕ್ಕ ಮನೆ ಅಲ್ಲವಲ್ಲ ವಸಂತಸೇನೆ. |

ವಸಂತಸೇನೆ — ಮನುಷ್ಯರನ್ನು ನೋಡಿ ಒಡವೆ ಇಡ್ತಾರೆಯೇ ಹೊರತು ಮನೆ ನೋಡಿ ಅಲ್ಲ. ಅಲ್ಲವೆ ?

ಚಾರುದತ್ತ — ಮೈತ್ರೇಯ, ಈ ಆಭರಣ ತಗೊ.

ವಿದೂಷಕ — (ತೆಗೆದುಕೊಂಡು) ವಸಂತಸೇನೆ, ದೇವರು ನಿನ್ನನ್ನು ತಣ್ಣಗೆ ಇಡಲಿ.

ಚಾರುದತ್ತ — (ನಗುತ್ತ) ಲೋ ಪೆದ್ದ. ಇವನ್ನೆಲ್ಲ ಕೊಟ್ಟಿರೋದು ನಮ್ಮಲ್ಲಿ ಕೆಲವು ದಿನ ಇಡೋದಕ್ಕೆ ತಿಳೀತಾ ?

ವಿದೂಷಕ — ಅಷ್ಟೇನೆ ? ನನಗೇ ಕೊಟ್ಟಳೇನೋ ಅಂದುಕೊಂಡಿದ್ದೆ. ಸರಿ, ಇದು ಏನಾದರೆ ನನಗೇನು ? ಕಳ್ಳರು ಹಾರಿಸಿಕೊಂಡು ಹೋದರೂ ಸರಿಯೆ.

ವಸಂತಸೇನೆ — ಆರ್ಯ, ಈತನನ್ನು ಜೊತೆಗೆ ಕಳಿಸಿದರೆ ಮನೆಗೆ ಹೋಗ್ತೇನೆ.

ಚಾರುದತ್ತ — ಹೋಗು ಮೈತ್ರೇಯ. ಆಕೆಯ ಮನೆಗೆ ಬಿಟ್ಟು ಬಾ.

ವಿದೂಷಕ — ಚೆನ್ನಾಯಿತು ಬಿಡಪ್ಪ ! ನೀನು ರಾಜಹಂಸ. ಇವಳು ಕಲಹಂಸಗಾಮಿನಿ. ನೀವಿಬ್ಬರೂ ಒಟ್ಟಿಗೆ ಹೋದರೆ ಚೆಂದ. ಅದು ಬಿಟ್ಟು ನನ್ನಂಥ ಬಡಬ್ರಾಹ್ಮಣ ಹೋದರೆ ಮುಗೀತು. ನಾಲ್ಕು ದಾರಿ ಸೇರೋ ಚೌಕದಲ್ಲಿ ಬಿಸಾಡಿದ ಅನ್ನವನ್ನು ನಾಯಿಗಳು ಕಿತ್ತಾಡಿ ತಿನ್ನೋ ಹಾಗೆ ಜನ ನನ್ನನ್ನು ಮುಗಿಸಿಬಿಡ್ತಾರೆ.

ಚಾರುದತ್ತ — (ನಗುತ್ತ) ಹೋಗಲಿ ಬಿಡು, ನಾನೇ ಹೋಗ್ತೀನಿ. ಒಂದು ವಿಷಯ ಎಚ್ಚರ ಇರಲಿ. ಈ ಒಡವೆ ಗಂಟು ಭದ್ರ : ಹಗಲೆಲ್ಲ ವರ್ಧಮಾನಕ, ರಾತ್ರಿಯೆಲ್ಲ ನೀನು ಇದನ್ನು ನೋಡಿಕೋಬೇಕು.

ವಿದೂಷಕ — ಆಗಲಿ ನಡಿ.

* * * *

## ಎರಡನೆಯ ಅಂಕ

ಸಂವಾಹಕ — (ಓಡಿಬಂದು) ಸಾಕಪ್ಪಾ ಸಾಕು ಈ ಜೂಜಿನ ಸಹವಾಸ. ಒಂದೇ ನಿಮಿಷದಲ್ಲಿ ಹತ್ತುವರಹ ಸೋತುಬಿಟ್ಟೆನಲ್ಲ ! ಜೂಜುಗಾರರು ಏನೋ ಜ್ಞಾನದಲ್ಲಿದ್ದಾಗ ಅವರ ಕಣ್ಣು ಮರೆಸಿ ಓಡಿಬಂದೆ. ಅವರು ಹಾಗೆಲ್ಲ ಬಡಪೆಟ್ಟಿಗೆ ಬಿಡೋವರಲ್ಲ. ಇಲ್ಲಿಗೂ ಬರುವವರೇ. ಹೇಗೆ ತಪ್ಪಿಸಿಕೊಳ್ಳಲಿ ? (ಯೋಚಿಸಿ) ಈ ಹಾಳು ದೇವಸ್ಥಾನದೊಳಕ್ಕೆ ಹಿಂದುಮುಂದಾಗಿ ಹೋಗಿ ದೇವರ ವಿಗ್ರಹದ ಹಾಗೆ ನಿಂತುಬಿಟ್ಟರೆ ? ಅದೇ ಸರಿ !

ಮಾಥುರ — (ಸಭಿಕನ ಜೊತೆ ಬಂದು) ಅಯ್ಯಾ ಸಭಿಕ, ಆ ನೀಚ ಸೋತ ಕೂಡಲೇ ಹೇಗೆ ಓಡಿಹೋದ ನೋಡು ? ಓಡು. ಬೇಕಾದ್ದಾಗಲಿ ಇವತ್ತು ಅವನನ್ನ ಹಿಡೀಲೇಬೇಕು.

ಸಭಿಕ — ಹಾ ! ಇಲ್ಲೇ ಹೋಗಿರಬೇಕು, ನೋಡು ! ಹೆಜ್ಜೆ ಗುರುತು ಇಲ್ಲಿಗೆ ಮುಗಿದಿದೆ.

ಮಾಥುರ — ಈ ಹೆಜ್ಜೆ ನೋಡಿದರೆ ಯಾರೋ ಹಿಂದುಮುಂದಾಗಿ ದೇವಾಲಯದೊಳಕ್ಕೆ ಹೋಗಿರೋ ಹಾಗಿದೆ. ಒಳಗೆ ಏನೋ ಒಂದು ವಿಗ್ರಹ ಕಾಣಿಸ್ತಿದೆ. ಇದು ವರೆಗೆ ಇಲ್ಲಿ ಯಾವ ವಿಗ್ರಹ ನೋಡಿದ್ದೂ ಜ್ಞಾಪಕವಿಲ್ಲವಲ್ಲ. (ಯೋಚಿಸಿ) ಸರಿ ಸರಿ. ಗೊತ್ತಾಯ್ತು. ಬಾ! ಇವನು ಅಂಥಿಂಥವನಲ್ಲ, ಮಹಾಕೊರಮ! (ಒಳಗೆ ಬಂದು ವಿಗ್ರಹದ ಎದುರಿಗೇ ಕೂತು)

ಮಾಥುರ — ಬಾರೋ. ಇಲ್ಲೊಂದು ಆಟ ಆಡೋಣ.

ಸಭಿಕ — ಲೋ. ಈ ಆಟ ನಾನೇ ಗೆಲ್ತೀನಿ. ಏನು ಹೇಳ್ತಿ?

ಮಾಥುರ — ಹೋಗೊ ಹೋಗೊ. ನಿನ್ನ ಹಣೇಲೇ ಬರೀಲಿಲ್ಲ. ನೀ ಇಟ್ಟ್ಯಾನೆ, ಇದು ನನ್ನದೇ.

ಸಭಿಕ — ನಾನು ಗೆದ್ದರೆ?

ಮಾಥುರ — ನಾನು ಗೆದ್ದರೆ?

ಸಂವಾಹಕ — (ತಡೆಯಲಾರದೆ ಮುಂದೆ ಬಂದು) ನಾನು ಬಿಟ್ಟರೆ ಅಲ್ಲವೇನ್ರೋ ನೀವು ಗೆಲ್ಲೋದು?

ಸಭಿಕ — (ಅವನನ್ನು ಹಿಡಿದುಕೊಂಡು) ಸಿಕ್ಕಿದೆಯೇನೋ ಕಳ್ಳ! ಈಗ ಎಲ್ಲಿಗೆ ಹೋಗ್ತಿ?

ಮಾಥುರ — ಅಯೋಗ್ಯ! ಮೊದಲು ನಮ್ಮ ದುಡ್ಡು ಇಟ್ಟು ಮಾತಾಡು.

ಸಂವಾಹಕ — (ಸ್ವಗತ) ಅಯ್ಯೋ ಹಾಳು ಚಪಲವೆ! ತೆಪ್ಪಗೆ ಇರಬಾರದೆ? ನಾನಾಗಿ ಇವರ ಕೈಗೆ ಬಿದ್ದೆನಲ್ಲಪ್ಪ! (ಪ್ರಕಾಶ) ಆಗಲಿ ಕಣ್ರಯ್ಯಾ. ಕೊಡ್ತೀನಿ.

ಮಾಥುರ — ಎಲ್ಲಿ? ನನ್ನ ದುಡ್ಡು ಇಡು, ಹ್ಞೂ, ಮೊದಲು.

ಸಂವಾಹಕ — ಕೊಂಚ ತಾಳಯ್ಯ, ಯಾಕೋ ತಲೆ ತಿರುಗ್ತಿದೆ. (ಕೆಳಗೆ ಬೀಳುವನು)

ಸಭಿಕ — ಲೇ, ದುಡ್ಡು ತಪ್ಪಿಸೋಕೆ ಏನೆಲ್ಲ ಆಟ ಕಟ್ತಿದಾನೆ ನೋಡು! ನಾಲ್ಕು ಬಿಡು. ತಾನೇ ಏಳ್ತಾನೆ. (ಸಂವಾಹಕನನ್ನು ಎಬ್ಬಿಸಿ ಹೊಡೆಯುವರು) ಮರ್ಯಾದೆಯಾಗಿ ದುಡ್ಡು ಕೊಡ್ತೀಯೋ? ಕಕ್ಕಿಸಲೊ?

ಸಂವಾಹಕ — ಕೊಡ್ತೀನ್ರಯ್ಯ. ದೇವರಾಣೆ ಕೊಡ್ತೀನಿ. ಆದರೆ ಈಗ ನನ್ನ ಕೈಯಲ್ಲಿ ಇಲ್ಲ ಅಷ್ಟೆ. (ಸಭಿಕನ ಹತ್ತಿರ ಬಂದು) ನೋಡಪ್ಪ. ನಿನಗೆ ಅರ್ಧ ಹಣ ಕೊಟ್ಟರೆ ಇನ್ನರ್ಧ ಬಿಡ್ತಿ ತಾನೇ?

ಸಭಿಕ — ಆಗಲಿ ಕೊಡು. ಎಷ್ಟು ಬಂದರೆ ಅಷ್ಟೇ ಸಾಕು.

ಸಂವಾಹಕ — (ಮಾಥುರನ ಹತ್ತಿರ ಬಂದು) ಏನಪ್ಪ ಮಾಥುರ? ಅರ್ಧ ಹಣ ಬಿಟ್ಟುಬಿಡು. ಇನ್ನರ್ಧ ಕಂತಿನಲ್ಲಿ ಕೊಡ್ತೀನಿ ಆಯ್ತು?

ಮಾಥುರ — ಆಯ್ತು. ಕೊಡು.

ಸಂವಾಹಕ — ಹಾಗಾದರೆ ನೀನು ಅರ್ಧ ಹಣ ಬಿಟ್ಟೆ ತಾನೆ?

ಮಾಥುರ ಬಿಟ್ಟೆ.

ಸಂವಾಹಕ (ಸಭಿಕನ ಕಡೆ ತಿರುಗಿ) ನೀನೂ ಅರ್ಧ ಬಿಟ್ಟೆ, ತಾನೆ ?

ಸಭಿಕ ಬಿಟ್ಟೆ.

ಸಂವಾಹಕ ಎಲ್ಲ ಕೇಳಿದ್ರಿ, ತಾನೆ ? ನಾನಿನ್ನು ಹೊರಡ್ತೀನಿ.

ಮಾಥುರ ಲೋ ಮೋಸಗಾರ ! ಏನೋ ಯುಕ್ತಿ ತೆಗೀತಿದೀಯ ? ನಿಮ್ಮಪ್ಪ ಕಲಿಸಿ ಕೊಟ್ಟನೇನೋ ಇದನ್ನ ? ಮೊದಲು ಹಣ ಮಡಗಿ ಮಾತಾಡೊ.

ಸಂವಾಹಕ ಹೇಗೆ ಕೊಡಲಪ್ಪ ? ನೀನೇ ಹೇಳು.

ಮಾಥುರ ಹೇಗೆ ಕೊಡೋದೆ ? ನಿನ್ನಪ್ಪನನ್ನ ಮಾರಿ ಕೊಡು.

ಸಂವಾಹಕ ನನ್ನ ಅಪ್ಪ ಇಲ್ಲವಲ್ಲ.

ಮಾಥುರ ಅಮ್ಮನನ್ನು ಮಾರಿ ಕೊಡು.

ಸಂವಾಹಕ ಅವಳೂ ಇಲ್ಲವಲ್ಲ.

ಮಾಥುರ ನಿನ್ನನ್ನೇ ಮಾರಿ ಕೊಡಯ್ಯ. ಒಟ್ಟಿನಲ್ಲಿ ಹಣ ಕೊಟ್ಟರೆ ತೀರಿತು.

ಸಂವಾಹಕ ಆಗಲಿ. ನನ್ನನ್ನೇ ಮಾರಿಕೋತೀನಿ. ಸರಿಯೊ ? ದೊಡ್ಡರಸ್ತೆಗೆ ಹೋಗೋಣ ನಡೀರಿ.

**(ಸ್ಥಾನ—ವಸಂತಸೇನೆಯ ಮನೆ)**

(ವಸಂತಸೇನೆ ಮತ್ತು ಮದನಿಕೆ ಕುಳಿತಿರುವರು)

ವಸಂತಸೇನೆ ಆಮೇಲೆ ?

ಮದನಿಕೆ ಇದೇನಕ್ಕ ! ಯಾರೂ ಮಾತಾಡಲೇ ಇಲ್ಲ. ಆದರೂ ಆಮೇಲೆ ಅಂತ ಕೇಳ್ತೀಯಲ್ಲ.

ವಸಂತಸೇನೆ ನಾನು ಈಗ ಏನು ಹೇಳಿದೆ ?

ಮದನಿಕೆ ಏನನ್ನೋ ಕೇಳುವ ಹಾಗೆ 'ಆಮೇಲೆ' ಅಂತ ಹೇಳಿದೆ.

ವಸಂತಸೇನೆ ಹೌದೆ ?

ಮದನಿಕೆ ಅಕ್ಕ, ಸ್ನೇಹದಲ್ಲಿ ಕೇಳ್ತಿದೀನಿ. ಮನಸ್ಸು ಬಿಚ್ಚಿ ಹೇಳು. ಯಾಕೆ ಈಚೆಗೆ ಒಂದು ಥರಾ ಇದೀಯಲ್ಲ ?

ವಸಂತಸೇನೆ ಹೇಗೆ ಇದೀನೆ ?

ಮದನಿಕೆ ಏನೋ ಚಿಂತೆ ಮಾಡ್ತಿರೊ ಹಾಗೆ.

ವಸಂತಸೇನೆ ಇನ್ನೊಬ್ಬರ ಮನಸ್ಸು ತಿಳಿಯೋದರಲ್ಲಿ ಮಹಾಚತುರೆ ಕಣೆ ನೀನು !

ಮದನಿಕೆ ಅಮ್ಮನವರ ಮನಸ್ಸು ಯಾರ ಮೇಲೆ ? ಬ್ರಾಹ್ಮಣನ ಮೇಲೊ, ರಾಜನ ಮೇಲೊ ?

ವಸಂತಸೇನೆ ಯಾರ ಮೇಲೂ ಅಲ್ಲ. ನೀನು ನನ್ನ ಜೊತೆ ಮದನೋದ್ಯಾನಕ್ಕೆ ಬಂದಿರಲಿಲ್ವೆ ? ಆದರೂ ತಿಳೀದವಳ ಹಾಗೆ ಕೇಳ್ತಿ.

ಮದನಿಕೆ ಓಹೋ ತಿಳೀತು ತಿಳೀತು! ನೀನು ಕಷ್ಟಕ್ಕೆ ಒಳ್ಗಾಗ ಕಾಪಾಡಿದನಲ್ಲ, ಅವನೋ!

ವಸಂತಸೇನೆ ಅವನ ಹೆಸರೇನು ಹೇಳು ?

ಮದನಿಕೆ ಚಾರುದತ್ತ ತಾನೆ ?

ವಸಂತಸೇನೆ ಮಹಾಬುದ್ಧಿ ಕಣೇ ನಿನಗೆ !

ಮದನಿಕೆ ಆದರೆ ಅವನು ತುಂಬ ಬಡವ ಅಂತ ಕೇಳಿದೀವಲ್ಲ ಅಕ್ಕ.

ವಸಂತಸೇನೆ ಆದ್ದರಿಂದಲೇ ನನಗೆ ಅವನು ಅಂದರೆ ಪ್ರಾಣ. ಬಡವನಲ್ಲಿ ಮನಸ್ಸು ಇಟ್ಟ ಸೂಳೆಗೆ ಲೋಕದಲ್ಲಿ ಅಪವಾದ ಇಲ್ಲ.

ಮದನಿಕೆ ಇದೇನಕ್ಕ ? ಹೂವಿಲ್ಲದ ಮರಕ್ಕೆ ಮಧುಕರಿ ಹೋಗೋದುಂಟೆ ?

ವಸಂತಸೇನೆ ಆದ್ದರಿಂದಲ್ಲೇ ಅದನ್ನು ಮಧುಕರಿ ಅನ್ನೋದು.

ಮದನಿಕೆ ಅಷ್ಟು ಪ್ರೀತಿಯಿದ್ದರೂ ನೀನು ಅವನ ಮನೆಗೆ ಹೋಗೋದಿಲ್ವಲ್ಲ. ಯಾಕೆ ?

ವಸಂತಸೇನೆ ಅವನು ತೊಂದರೇಲಿ ಇರೋದರಿಂದ : ನನ್ನನ್ನು ನೋಡೋದಕ್ಕೆ ಸಂಕೋಚ ಪಡ್ತಾನಲ್ಲ ಅಂತ

ಮದನಿಕೆ ಆದ್ದರಿಂದಲೇ ಅಲ್ಲವೆ ನೀನು ಅವನ ವಶದಲ್ಲಿ ಒಡವೆ ಕೊಟ್ಟು ಬಂದದ್ದು ?

ವಸಂತಸೇನೆ ಎಷ್ಟು ಸೂಕ್ಷ್ಮಬುದ್ಧಿಯೇ ನಿನ್ನದು !

(ತೆರೆಯಲ್ಲಿ) ಜೂಜಿನಲ್ಲಿ ಸೋತು ಹಣ ಕೊಡದೆ ಓಡ್ತಿದಾನೆ ನೋಡಿ! ಅಹಾ! ತಪ್ಪಿಸಿಕೋತಾನ, ಹಿಡಕೊಳ್ಳಿ, ಹಿಡಕೊಳ್ಳಿ : ಓಡಬೇಡೊ, ಏ, ಮೋಸಗಾರ ನಿಲ್ಲೊ. ನಿಲ್ಲೊ !

ವಸಂತಸೇನೆ ಏನು ಗಲಾಟೆ ಇದು ? (ಹೊರಕ್ಕೆ ಹೊರಡುತ್ತಿರುವರು)

(ಕಂಗಾಲಾದ ಸಂವಾಹಕ ಒಳಕ್ಕೆ ಓಡಿಬರುವನು)

ಸಂವಾಹಕ ಅಮ್ಮ, ನಿಮಗೆ ಶರಣಾಗಿದೇನೆ. ಕಾಪಾಡಿ. (ಕೈಮುಗಿದು ನಡುಗುತ್ತ ನಿಲ್ಲುವನು)

ವಸಂತಸೇನೆ ಹೆದರಬೇಡ ಸಮಾಧಾನ ಮಾಡಿಕೊ (ಮದನಿಕೆಗೆ ಸನ್ನೆ ಮಾಡುವಳು)

ಮದನಿಕೆ ನೀನು ಯಾರಪ್ಪ ? ಕೆಲಸ ಏನು? ಯಾಕೆ ಹೀಗೆ ಓಡಿಬಂದೆ ? ಏನು ಸಮಾಚಾರ ?

ಸಂವಾಹಕ ನಾನು ಪಾಟಲೀಪುರದವನು ; ಜಾತಿಯಲ್ಲಿ ವೈಶಾಳಿಕ ; ಕಾಲು ಒತ್ತೋದು ವೃತ್ತಿ... ಸಾಕಷ್ಟು ಹಿಂದೆ ಈ ಉಜ್ಜಯಿನಿಗೆ ಬಂದೆ.

ವಸಂತಸೇನೆ ಮುಂದೆ ?

ಸಂವಾಹಕ ಇಲ್ಲಿ ಒಬ್ಬನ ಮನೇಲಿ ಕೆಲಸಕ್ಕಿದ್ದೆ. ಅವನೊಬ್ಬ ಮಹಾನುಭಾವ, ಎಲ್ಲರಿಗೂ ಉಪಕಾರಮಾಡೋ ಉದಾರಿ. ಆದರೆ ಯಾರಿಗೂ ಅದನ್ನ ಹೇಳದವನು.

ಮದನಿಕೆ ನಮ್ಮ ಊರಿನಲ್ಲೇ ಇರೋ ಅಂಥ ಗುಣವಂತ ಯಾರು ?

ಸಂವಾಹಕ ತನ್ನಲ್ಲಿದ್ದ ಸಂಪತ್ತನ್ನೆಲ್ಲ ಬೇರೆಯವರ ಕಷ್ಟಕ್ಕೆ ತೆತ್ತು...

ವಸಂತಸೇನೆ ಸಂಪತ್ತೆಲ್ಲಾ ಕರಗಿತೊ ?

ಸಂವಾಹಕ ನಿನಗೆ ಅದು ಹೇಗೆ ತಿಳೀತು ?

ವಸಂತಸೇನೆ ಸಂಪತ್ತು ಗುಣ ಒಟ್ಟಿಗೆ ಇರೋದಿಲ್ಲ. ಉಪ್ಪುನೀರಿನ ಕೆರೇಲಿ ನೀರು ಬತ್ತೀತೆ ?

ಮದನಿಕೆ ಅವನ ಹೆಸರೇನಪ್ಪ ?

ಸಂವಾಹಕ ಭೂಮಿಗಿಳಿದ ಚಂದ್ರನ ಹಾಗಿರೋ ಆತನ ಹೆಸರು ಯಾರಿಗೆ ಗೊತ್ತಿಲ್ಲ ? ಚಾರುದತ್ತ ಇಡೀ ಉಜ್ಜಯಿನಿಗೇ ಗ್ರೊತ್ತು.

ವಸಂತಸೇನೆ (ಹರ್ಷದಿಂದ ಮೇಲೆದ್ದು) ಆರ್ಯ, ಇದೂ ನಿನ್ನ ಮನೆ ಅಂತ ತಿಳಿ. ಮದನಿಕೆ, ಇವನಿಗೆ ಕೂರೋದಕ್ಕೆ ಪೀಠ ಹಾಕು, ತುಂಬ ಶ್ರಮವಾಗಿರಬಹುದು. ಬೀಸಣಿಗೆಯಿಂದ ಗಾಳಿ ಹಾಕು.

(ಮದನಿಕೆ ಪೀಠವನ್ನು ಹಾಕುವಳು)

ಸಂವಾಹಕ (ಸ್ವಗತ) ಏನು ಆಶ್ಚರ್ಯ ! ಚಾರುದತ್ತನ ಹೆಸರು ಹೇಳಿದ ಮಾತ್ರಕ್ಕೇ ನನಗೆ ಎಷ್ಟು ಬೆಲೆ ! ಭಲೆ ಚಾರುದತ್ತ ! ಈ ಹೊತ್ತು ನಿಜವಾಗಿ ಬದುಕಿರೋ ವ್ಯಕ್ತಿ ನೀನೊಬ್ಬನೇ. ಉಳಿದವರೆಲ್ಲ ಬರೀ ಉಸಿರಾಡೋ ಲೆಕ್ಕದವರು. (ಪ್ರಕಾಶ —ವಸಂತಸೇನೆಗೆ) ಕೂತುಕೋ ತಾಯಿ.

ವಸಂತಸೇನೆ ಆಮೇಲೆ ?

ಸಂವಾಹಕ ನಾನು ಚಾರುದತ್ತನ ಪಾದಸೇವೆ ಮಾಡಿಕೊಂಡಿದ್ದೆ. ಈ ದಿನ ಜೂಜಿಗೆ ಅಂತ ಹೋದೆ. ಅಲ್ಲಿ ಹತ್ತು ವರಹ ಸೋತುಬಿಟ್ಟೆ.

ಮಾಥುರ (ತೆರೆಯಲ್ಲಿ) ಅಯ್ಯೋಗ್ಯ ! ಮೋಸಮಾಡಿ ಓಡಿಹೋದ !

ಸಂವಾಹಕ ಅಯ್ಯೋ ! ಜೂಜಿನಲ್ಲಿ ಗೆದ್ದವರು ಹುಡುಕಿಕೊಂಡು ಈ ಕಡೆಗೇ ಬರ್‍ತಿದಾರೆ ! ನೀನೇ ಕಾಪಾಡಬೇಕು ! (ಭಯಗೊಂಡು ನಿಲ್ಲುವನು)

ವಸಂತಸೇನೆ ಮದನಿಕೆ, ಈ ಕೈಕಡಗ ತಗೊ. ಈತ ಕೊಟ್ಟ ಅಂತ ಹೇಳಿ ಇವನನ್ನು ಅಟ್ಟಿ ಬಂದಿರೋ ಆ ಜೂಜುಗಾರರಿಗೆ ಕೊಡು.

(ಮದನಿಕೆ ತೆಗೆದುಕೊಂಡು ಹೋಗಿ ಮತ್ತೆ ಬರುವಳು)

ಮದನಿಕೆ ಆರ್ಯೆ, ಕೊಟ್ಟು ಬಂದೆ.

ವಸಂತಸೇನೆ ಏನು ಹೇಳಿದರು ?

ಮದನಿಕೆ ನಮಗೆ ನಿನ್ನ ಹಣ ಬಂತು. ಬೇಕಾದರೆ ಮತ್ತೆ ಜೂಜಾಟಕ್ಕೆ ಬರಬಹುದು ಅಂದರು.

ಸಂವಾಹಕ ನಮಸ್ಕಾರ ! ಇನ್ನು ಜನ್ಮ ಜನ್ಮಕ್ಕೂ ಆ ಚಟದ ಸಹವಾಸ ಬೇಡ. ಈಗಾದ ಅವಮಾನವೇ ನನ್ನನ್ನು ಕಿತ್ತು ತಿನ್ನುತ್ತಾ ಇದೆ. ಸಾಕು. ಈ ಬದುಕಿಗೆ ಎಳ್ಳು ನೀರು ಬಿಟ್ಟು ಬೌದ್ಧ ಸನ್ಯಾಸಿಯಾಗಿಬಿಡ್ತೇನೆ. ಅಮ್ಮ, ಸಂವಾಹಕ ಅಂತ

ಒಬ್ಬ ಜೂಜುಕೋರ ಇದ್ದ. ನಿಮ್ಮಿಂದ ಬಿಡುಗಡೆಯಾಗಿ ಬೌದ್ಧ ಭಿಕ್ಷುವಾದ ಅಂತ ನಿಮಗೆ ನೆನಪಿದ್ದರೆ ನಾನು ಧನ್ಯ (ಹೋಗುವನು)

(ತೆರೆಯಲ್ಲಿ ಕೋಲಾಹಲವಾಗುವುದು. ಒಂದು ಕ್ಷಣ ಬಿಟ್ಟು)

**ಕುಂಭೀಲಕ** (ಪ್ರವೇಶಿಸಿ) ತಾಯಿ, ನಮ್ಮ ಆನೆ ಸರಪಳಿ ಕಿತ್ತುಕೊಂಡು ಹೋಗಿ ಒಬ್ಬ ಸನ್ಯಾಸಿಯನ್ನ ಸೊಂಡಿಲಿನಲ್ಲಿ ಎತ್ತಿ ಬಿಸಾಡೋದರಲ್ಲಿತ್ತು. ನಾನು ಧೈರ್ಯ ಮಾಡಿ ಹೋಗಿ ಅವನನ್ನು ಬಿಡಿಸಿದೆ. ಅಲ್ಲೇ ಇದ್ದ ಒಬ್ಬ ಬ್ರಾಹ್ಮಣ ನನ್ನನ್ನು ತುಂಬ ಮೆಚ್ಚಿಕೊಂಡ. ಹತ್ತಿರ ಏನೂ ಇಲ್ಲದ ಕಾರಣ ತಾನು ಹೊದ್ದಿದ್ದ ಈ ವಸ್ತ್ರವನ್ನೇ ನನಗೆ ಬಹುಮಾನ ಕೊಟ್ಟು ಹೊರಟುಹೋದ. (ಉತ್ತರೀಯವನ್ನು ವಸಂತಸೇನೆಯ ಎದುರಿಗೆ ಇಡುವನು)

**ವಸಂತಸೇನೆ** ಆಹ ! ಇದು ಆರ್ಯ ಚಾರುದತ್ತನ ವಸ್ತ್ರ. ಇದು ನನ್ನಲ್ಲಿರಲಿ. ಕುಂಭೀಲಕ ನಿನ್ನ ಸಾಹಸಕ್ಕೆ ಈ ಆಭರಣ ತಗೊ (ತನ್ನ ಕೈಯಲ್ಲಿರುವ ಆಭರಣ ಕೊಡುವಳು) ನಡಿ ಮದನಿಕೆ, ನಾವು ಹೋಗೋಣ. (ಹೋಗುವರು)

* * *

## ಮೂರನೆಯ ಅಂಕ

**ಚಾರುದತ್ತ** (ವಿದೂಷಕನ ಜೊತೆ ಮಾತಾಡುತ್ತ ಬರುವನು) ಇವತ್ತಿನ ಸಂಗೀತ ಏನು ಚೆನ್ನಾಗಿತ್ತು ಮೈತ್ರೇಯ ! ರೇಭಿಲ ಸಾಕ್ಷಾತ್ ಗಂಧರ್ವ; ಅದೇನು ಸೊಗಸಾಗಿ ಹಾಡಿದ !

**ವಿದೂಷಕ** ಮಿತ್ರ, ಅಪರಾತ್ರಿಯಾಯ್ತು. ಆದರೆ ನಿನಗೆ ಇನ್ನೂ ಸಂಗೀತದ ಯೋಚನೆಯೇ ! ನನಗೆ ನೆಲದ ಮೇಲೆ ಉರುಳಿಕೊಂಡರೆ ಸಾಕಾಗಿದೆ. (ಮೈಮೇಲಿದ್ದ ವಸ್ತ್ರವನ್ನು ಅಲ್ಲೇ ಒಂದು ಕಡೆ ಹಾಸಿಕೊಂಡು ಮಲಗುವನು)

**ಚಾರುದತ್ತ** ಇದೇನೋ ಮೈತ್ರೇಯ, ಕಾಲು ಸಹ ತೊಳೆಯದೆ ಮಲಗಿಬಿಟ್ಟೆ ?

**ವಿದೂಷಕ** ಯಾಕೆ ತೊಳೀಬೇಕು ಹೇಳು ? ನನಗೇನು ಮಂಚವೆ ? ಹಾಸಿಗೆಯೆ ? ಕತ್ತೇ ಹಾಗೆ ನೆಲದ ಮೇಲೆ ಹೊರಳಾಡೋ ನನಗೆ ಕಾಲು ತೊಳೆಯೋದು ಬೇರೆ ಕೇಡು.

**ವರ್ಧಮಾನಕ** ಸ್ವಾಮಿ, ಇಗೊ ಒಡವೆಗಂಟು. ಹಗಲು ನಾನು ನೋಡಿಕೋ ಬೇಕು, ರಾತ್ರಿ ನೀವು ಅಂತ ಯಜಮಾನರು ಹೇಳಿದಾರೆ. (ಕೊಟ್ಟು ಹೋಗುವನು)

**ವಿದೂಷಕ** ಈ ಹಾಳು ಒಡವೆಗಂಟಿನ ಕಾಟ ಬೇರೆ. ಏನು ದರಿದ್ರ ಊರೋ ಇದು ! ಅಲ್ಲ, ಇಷ್ಟು ದೊಡ್ಡ ಊರಿನಲ್ಲಿ ಒಬ್ಬ ಸರಿಯಾದ ಕಳ್ಳ ಇಲ್ಲವೆ ? ನಾನೂ

ನಿದ್ದೆ ಮಾಡ್ತಿರೋವಾಗ ಈ ಹಾಳು ಒಡವೆಗಂಟನ್ನ ಕದ್ದುಕೊಂಡು ಹೋಗಬಾರದೆ ? ಇದು ಇರೋವರಗೂ ನನಗೆ ಸುಖನಿದ್ದೆ ಎಲ್ಲಿ ? ಮಿತ್ರ ಚಾರುದತ್ತ, ಇದನ್ನು ಒಳಗಿನ ತೊಟ್ಟೀಲಿ ಇಟ್ಟುಬಿಡಲೇನಯ್ಯ ?

**ಚಾರುದತ್ತ** ಬೇಡ ಮಹಾರಾಯ ! ಅದನ್ನು ವಸಂತಸೇನೆಗೆ ವಾಪಸ್ಸು ಕೊಡೋತನಕ ನಿನ್ನ ಹತ್ತಿರವೇ ಎಚ್ಚರಿಕೆಯಿಂದ ಇಟ್ಟುಕೊ. ಉದಾಸೀನ ಮಾಡಬೇಡ.

**ವಿದೂಷಕ** ಸರಿಕಣಪ್ಪ. ನನ್ನ ಹಣೇಬರಹ !

(ಇಬ್ಬರೂ ನಿದ್ರಿಸುವರು. ಶರ್ವಿಲಕ ಎಂಬ ಕಳ್ಳ ಮೆಲ್ಲಗೆ ಬರುವನು)

**ಶರ್ವಿಲಕ** ಎಲಾ ಇದರ ! ಇಷ್ಟು ದೊಡ್ಡ ಮನೆ. ಆದರೆ ಹಣ, ಒಡವೆ ಏನೂ ಸಿಗ್ತಾ ಇಲ್ಲ. ಎಲ್ಲಿ ನೋಡಿದರೂ ಪುಸ್ತಕ, ಮದ್ದಳೆ, ವೀಣೆ—ಇಂಥವೇ ? ಏನಾದರೂ ನಾಟ್ಯ ಕಲಿಸೋವರ ಮನೆಯೋ ? ದೊಡ್ಡ ಮನೆ, ಏನಾದರೂ ಸಿಕ್ಕೀತು ಅಂತ ಕನ್ನ ಕೊರೆದರೆ ಹೀಗಾಯ್ತಲ್ಲಪ್ಪ ! ಇವರ ಯಜಮಾನ ಬಡವನೇ ಇರಬೇಕು. ಅಥವಾ ಯಾರಿಗೆ ಗೊತ್ತು ? ಕಳ್ಳರು ಹೊಡೆದಾರು ಅಂತ ಆಸಾಮಿ ದುಡ್ಡನ್ನೆಲ್ಲ ಎಲ್ಲಾದರೂ ಹೂಗಿದಿಟ್ಟಿದಾನೋ !

**ವಿದೂಷಕ** (ಕನವರಿಸುತ್ತ) ಅಯ್ಯೋ ಚಾರುದತ್ತ, ಮನೆಗೆ ಕನ್ನ ಬಿದ್ದ ಹಾಗಿದೆ. ಕಳ್ಳನೂ ಬಂದಿರೋ ಹಾಗಿದೆ. ನಿನ್ನ ಈ ಒಡವೆಗಂಟನ್ನು ನೀನೆ ತಗೊಂಡುಬಿಡಪ್ಪ !

**ಶರ್ವಿಲಕ** (ಬೆಚ್ಚಿ) ಯಾರೋ ಖದೀಮನ ಹಾಗೆ ಕಾಣ್ತಾನಲ್ಲ ! ಎಚ್ಚರವಾಗಿದಾನೋ ಅಥವಾ ಕನವರಿಸ್ತಿದಾನೊ? (ಪರೀಕ್ಷಿಸಿ) ಇಲ್ಲ ಇಲ್ಲ, ನಿದ್ದೇಲಿದಾನೆ. (ಸಂತೋಷದಿಂದ) ಆಹಾ ! ಇವನ ಕೈಯಲ್ಲಿ ಹರಕು ಬಟ್ಟೇಲಿ ಕಟ್ಟಿದ ಭಾರಿ ಒಡವೆಗಂಟೇ ಇದೆ. ಅದೃಷ್ಟ ಅಂದರೆ ಇವಪ್ಪ !

**ವಿದೂಷಕ** (ಕನವರಿಸುತ್ತ) ಅಯ್ಯೋ ಮಿತ್ರ, ಎಷ್ಟುಸಲ ಕೇಳಿಕೋಬೇಕು ? ಬೇಗ ತಗೊ. ಕಾಡಿಸಬೇಡ. ತಗೊಳ್ಳದಿದ್ದರೆ ನೋಡು, ಗೋಬ್ರಾಹ್ಮಣರ ಮೇಲೆ ಆಣೆಇದೆ. (ಶರ್ವಿಲಕ ತೆಗೆದುಕೊಳ್ಳಲು ಕೈಚಾಚುವನು. ಮೈತ್ರೇಯನ ಕೈ ಅವನ ಕೈಗೆ ಸೋಕುವುದು)

**ವಿದೂಷಕ** ಇದೇನು ಮಿತ್ರ, ಕೈ ಇಷ್ಟು ತಣ್ಣಗಿದೆ ?

**ಶರ್ವಿಲಕ** (ಸ್ವಗತ) ಅಯ್ಯೋ ದೇವರೆ, ಏನು ರಂಪ ಮಾಡಿಕೊಂಡೆನಲ್ಲ ! ಬಾಗಿಲ ತಿರುಗಣೆಗೆ ನೀರು ಚೆಲ್ಲಿ ಕೈ ಒದ್ದೆಯಾಗಿತ್ತು. ಇರಲಿ, (ಕೈಯನ್ನು ಕಂಕುಳಲ್ಲಿಟ್ಟು ಬೆಚ್ಚಗೆ ಮಾಡಿಕೊಂಡು)

**ವಿದೂಷಕ** ತೆಗೆದುಕೊಂಡೆಯಾ ?

**ಶರ್ವಿಲಕ** ಬ್ರಾಹ್ಮಣನ ಮಾತನ್ನು ಮೀರಬಾರದು ಅಂತ ತೆಗೆದುಕೊಂಡೆ.

**ವಿದೂಷಕ** ಸರಿ, ಇನ್ನು ನಾನು ಸುಖವಾಗಿ ನಿದ್ದೆ ಮಾಡ್ತೀನಪ್ಪ.

ಶರ್ವಿಲಕ — ನೂರು ವರ್ಷ ಹೀಗೇ ನಿದ್ದೆ ಮಾಡಪ್ಪ ಬ್ರಾಹ್ಮಣಮಹೇಶ್ವ! (ಸ್ವಲ್ಪ ಯೋಚಿಸಿ) ಛೆ, ನನ್ನ ಬದುಕು ಎಂಥ ಬದುಕು! ಬ್ರಾಹ್ಮಣ ಕುಲದಲ್ಲಿ ಹುಟ್ಟಿ ಇಂಥ ಅಕಾರ್ಯ ಮಾಡ್ತಿದೀನಲ್ಲ? ಎಲ್ಲ ಆ ಮದನಿಕೆ ಸಲುವಾಗಿ. ಅವಳ ಒಡವೆಗೆ ಈ ಒಡವೆ ಕೊಟ್ಟು ಅವಳನ್ನು ದಾಸಿ ಕೆಲಸದಿಂದ ಬಿಡಿಸಿಕೊಂಡು ಬರ್ತೀನಿ. ಅಲ್ಲಿಗೆ ನಾನು ಗೆದ್ದೆ (ಹೋಗುವನು)

(ರದನಿಕೆಯು ಪ್ರವೇಶ. ಶರ್ವಿಲಕ ಓಡುವುದನ್ನು ದೂರದಿಂದ ನೋಡುವಳು)

ರದನಿಕೆ — ಅಯ್ಯೋ ಮೈತ್ರೇಯ! ಏಳು ಏಳು! ಕಳ್ಳ ಮನೆಗೆ ಕನ್ನ ಹಾಕಿ ಓಡಿ ಹೋದ!

ವಿದೂಷಕ — (ಗಾಬರಿಯಾಗಿ ಎದ್ದು) ಏನು ಏನು ? ಕನ್ನ ಕಳ್ಳ ಹಾಕಿ ಓಡಿ ಹೋಯ್ತ ? ಅಯ್ಯೊ ದೇವರೆ !

ರದನಿಕೆ — ಸಾಕು ನಿಲ್ಲಿಸು. ಹಾಸ್ಯಕ್ಕೆ ಹೊತ್ತು ಗೊತ್ತು ಇಲ್ಲವೆ ?

ವಿದೂಷಕ — ಅಯ್ಯಾ ಚಾರುದತ್ತ. ಏಳು ಏಳು ! ಕಳ್ಳ ಮನೆಗೆ ಕನ್ನ ಹಾಕಿಬಿಟ್ಟಿದ್ದಾನೆ.

ಚಾರುದತ್ತ — ಯಾಕೆ, ಹಾಸ್ಯ ಮಾಡ್ತೀಯ ಮೈತ್ರೇಯ ?

ವಿದೂಷಕ — ಇಲ್ಲಪ್ಪ, ಖಂಡಿತ ನಿಜ. ನೀನೇ ನೋಡು.

ಚಾರುದತ್ತ — ಯಾವ ಜಾಗದಲ್ಲಿ ?

ವಿದೂಷಕ — ಇಗೋ ಇಲ್ಲೇ.

ಚಾರುದತ್ತ — (ನೋಡಿ, ಮುಖ ಅರಳಿಸಿ) ಆಹ! ಎಷ್ಟು ಸೊಗಸಾಗಿ ಕನ್ನ ಕೊರೆದಿದಾನೆ! ಕಳ್ಳರಲ್ಲೂ ಇವನು ಯಾರೋ ಭಾರಿ ಕುಶಲಿ ಅಂತ ಕಾಣುತ್ತೆ (ಹತ್ತಿರ ಹೋಗಿ ನೋಡಿ) ಪಾಪ! ಇದಕ್ಕೆ ಎಷ್ಟು ಕಷ್ಟಪಟ್ಟನೋ! ಏನೂ ಸಿಕ್ಕಲಿಲ್ಲವಲ್ಲ! ದೊಡ್ಡ ಸಾಹುಕಾರನ ಮನೆಗೆ ಕನ್ನ ಹಾಕಿದೆ. ಏನೂ ಸಿಗಲಿಲ್ಲ ಅಂತ ಸ್ನೇಹಿತರ ಹತ್ತಿರ ಹೇಗೆ ಹೇಳ್ತಾನೊ ಪಾಪ!

ವಿದೂಷಕ — ಅಯ್ಯಾ ಚಾರುದತ್ತ. ಕಳ್ಳನನ್ನ ಹೊಗಳ್ತೀಯಲ್ಲ! ಭಾರಿ ಮನೆ! ಚಿನ್ನದ್ದೊ, ರತ್ನದ್ದೊ ದೊಡ್ಡ ಗಂಟು ಸಿಕ್ಕೀತು ಅಂತ ಬಂದ. ಸಿಗಲಿಲ್ಲ ಅಂತ ಸುಮ್ಮನೆ ಹೋದನೆ ಹೊರತು ಇದ್ದಿದ್ದರೆ ಬಿಡ್ತಾ ಇದ್ದನೆ? (ಥಟ್ಟನೆ ನೆನಪಾಗಿ ತನ್ನಲ್ಲೇ) ಅಂದಹಾಗೆ ಜ್ಞಾಪಕ ಬಂತು. ಸದ್ಯ, ಚಾರುದತ್ತನ ಕೈಗೇ ಕೊಟ್ಟೆನಲ್ಲ! (ಪ್ರಕಾಶವಾಗಿ) ಅಲ್ಲ, ಚಾರುದತ್ತ, ಯಾವಾಗಲೂ ಈ ಮೈತ್ರೇಯ ಮಹಾ ಮೂರ್ಖ ಅಂತ ಹೇಳಿ ಹಾಸ್ಯ ಮಾಡ್ತಾ ಇದ್ದೆಯಲ್ಲ. ಈಗ ತಿಳೀತೋ ನಾನು ಬುದ್ಧಿವಂತ ಅನ್ನೋದು ? ರಾತ್ರೀನೆ ನಾನು ಒಡವೆ ಗಂಟು ನಿನ್ನ ಕೈಗೆ ಕೊಟ್ಟುಬಿಟ್ಟೆ. ಇಲ್ಲದೆ ಇದ್ದರೆ ಕಳ್ಳನ ಪಾಲಾಗ್ತಾ ಇತ್ತೊ ?

ಚಾರುದತ್ತ — ಯಾಕೆ ಸುಮ್ಮನೆ ತಮಾಷೆ ಮಾಡ್ತೀಯ ಮೈತ್ರೇಯ ?

ವಿದೂಷಕ — ಚೆನ್ನಾಯ್ತು, ಇಂಥ ಹೊತ್ತಿನಲ್ಲಿ ತಮಾಷೆ ಮಾಡ್ತೀನೇ ?

ಚಾರುದತ್ತ ಹಾಗಾದರೆ ಯಾವಾಗ ಕೊಟ್ಟೆ ?

ವಿದೂಷಕ ಇದೇನು ಹೀಗೆ ಕೇಳ್ತೀಯ ? ನಿನ್ನ ಕೈ ತಣ್ಣಗಿದೆ ಅಂತ ನಾನು ಹೇಳಲಿಲ್ವೆ ? ಆವಾಗಲೇ ಕೊಟ್ಟೆ. ಈಗಲಾದ್ರೂ ಜ್ಞಾಪಕ ಬಂತೇನಪ್ಪ !

ಚಾರುದತ್ತ ಇರಬಹುದು. ವಸ್ತು ಕಳ್ಳನ ಪಾಲಾಗಿರುವಂತೆ ಕಾಣುತ್ತೆ.

ವಿದೂಷಕ ಹೋಗಲಿ ಬಿಡು. ಕಳ್ಳ ಬರಿಗೈಯಲ್ಲಿ ಹೋಗೋ ಹಾಗಾಗಲಿಲ್ಲವಲ್ಲ. ಅದಕ್ಕೆ ನಾವು ಸಂತೋಷಪಡಬೇಕು.

ಚಾರುದತ್ತ (ದುಃಖದಿಂದ) ನನ್ನ ಸ್ವಂತದ್ದಾಗಿದ್ದರೆ ಹಾಗೆ ಹೇಳಬಹುದಾಗಿತ್ತು. ಕಂಡವರ ಒಡವೆ ಕಳಕೊಂಡೆನಲ್ಲ !

ವಿದೂಷಕ ಹೋದದ್ದು ಯಾರದ್ದೋ ಒಡವೆ. ನೀನು ಯಾಕೆ ದುಃಖಪಡಬೇಕು ? ಅಲ್ಲದೆ ಕಳ್ಳ ಕದ್ದರೆ ನಾವೇನು ಮಾಡೋಕೆ ಸಾಧ್ಯ ?

ಚಾರುದತ್ತ ಮೈತ್ರೇಯ. ನನಗೆ ಬಡತನ ಬಂದಿದೆ. ಇಂಥ ಹೊತ್ತಿನಲ್ಲಿ ಬೇರೆಯವರು ನಮ್ಮಲ್ಲಿಟ್ಟ ಒಡವೇನ ಕಳ್ಳರು ಕದ್ದರು ಅಂದರೆ ಯಾರು ನಂಬ್ತಾರೆ ? ಈವರೆಗೆ ನನ್ನ ವಿಧಿ ಸಂಪತ್ತೊಂದನ್ನೇ ಅಪಹರಿಸಿತ್ತು. ಈಗ ಯಶಸ್ಸಿಗೂ ಕೈ ಹಾಕಿತು.

ವಿದೂಷಕ ಗೆಳೆಯ, ನೀನು ಯಾಕೆ ಹೆದರ್ತೀಯ ? ನಾನಿದ್ದೇನೆ. "ಕೊಟ್ಟವರು ಯಾರು ? ತೆಗೆದುಕೊಂಡವರು ಯಾರು ? ಸಾಕ್ಷಿ ಏನಿದೆ ? ಎಲ್ಲ ಬರೀ ಸುಳ್ಳು" ಅಂತ ಎಲ್ಲರ ಬಾಯಿ ಬಡಿದುಬಿಡ್ತೇನೆ.

ಚಾರುದತ್ತ ಮೈತ್ರೇಯ. ಭಿಕ್ಷೆ ಬೇಡಿಯಾದರೂ ಆ ಪದಾರ್ಥದ ಹಣವನ್ನು ವಾಪಸ್ಸು ಮಾಡ್ತೀನೇ ಹೊರತು ಸುಳ್ಳು ಮಾತ್ರ ಹೇಳೋದಿಲ್ಲ.

ವಿದೂಷಕ ಸುಳ್ಳು ಹೇಳದಿದ್ದರೆ ಈ ಕಾಲದಲ್ಲಿ ಬದುಕಿದಹಾಗೇ !

ಧೂತಾದೇವಿ (ಬಂದು) ಮೈತ್ರೇಯನಿಗೂ ಅವರಿಗೂ ಏನೂ ಗಾಯವಾಗಿಲ್ಲ ತಾನೆ ರದನಿಕೆ ?

ರದನಿಕೆ ಇಲ್ಲ ಇಲ್ಲ. ಅಂಥದೇನೂ ಆಗಿಲ್ಲ. ಆದರೆ ವಸಂತಸೇನೆ ನಮ್ಮಲ್ಲಿಟ್ಟ ಒಡವೆ ಹೋಗಿದೆ.

ಧೂತಾದೇವಿ ಅಯ್ಯೋ ದೇವರೆ ! ಏನು ವಿಪತ್ತು ಬಂತು !

ರದನಿಕೆ ಸಮಾಧಾನ ಮಾಡಿಕೊಳ್ಳಿ, ಅಮ್ಮ.

ಧೂತಾದೇವಿ ರದನಿಕೆ, ನಮಗೆ ಈಗ ಬಡತನ. ಅದನ್ನು ತಾಳಲಾರದೆ ಕಂಡವರ ಒಡವೆ ಮುಟ್ಟಿಹಾಕಿದರು ಅಂತ ಜನ ಆಡಿಕೊಳ್ಳೋ ಹಾಗಾಯ್ತಲ್ಲ. (ಸ್ವಲ್ಪ ಯೋಚಿಸಿ) ನನಗೆ ತವರಿನಲ್ಲಿ ಕೊಟ್ಟ ಈ ರತ್ನಹಾರವೊಂದಿದೆ. ವಸಂತಸೇನೆಗೆ ಕೊಡಿ ಅಂತ ಇದನ್ನು ಇವರಿಗೆ ಕೊಡಬಹುದು. ಆದರೆ ತೆಗೆದುಕೊಳ್ತಾರೊ ಇಲ್ಲವೊ ? ಮೈತ್ರೇಯ !

ವಿದೂಷಕ (ಬಂದು) ಏನು ತಾಯಿ, ಕರೆದಿರಾ ?

ಧೂತಾದೇವಿ ನಾನು ರತ್ನಷಷ್ಠೀವ್ರತ ಮಾಡ್ತಿದೇನೆ. ಆದರ ಸಂಬಂಧವಾಗಿ ಬ್ರಾಹ್ಮಣನಿಗೆ ರತ್ನಹಾರ ದಾನಕೊಡಬೇಕು. ಈಗ ತಕ್ಕ ವೇಳೆ. ಈ ರತ್ನಹಾರ ತಗೊ.

ವಿದೂಷಕ ನಿನಗೆ ಒಳ್ಳೇದಾಗಲಿ ತಾಯಿ. ಚಾರುದತ್ತನಿಗೆ ಇದನ್ನು ತಿಳಿಸ್ತೇನೆ.

ಧೂತಾದೇವಿ ಆದರೆ ನಾನು ಲಜ್ಜೆ ಪಡೋ ಹಾಗೆ ಮಾತ್ರ ಏನೂ ಹೇಳಬೇಡ.

ವಿದೂಷಕ ಎಂಥ ದೊಡ್ಡ ಜೀವವಪ್ಪ ಇದು! ಎಂಥ ಧಾರಾಳ !

(ಚಾರುದತ್ತನ ಬಳಿ ಬಂದು ಅವನಿಗೆ ಹಾರ ಕೊಡುವನು)

ಚಾರುದತ್ತ (ನೋಡಿ) ಏನಿದು ?

ವಿದೂಷಕ ನಿನಗೆ ಅನುರೂಪಳಾದ ಹೆಂಡತಿ ದೊರೆತದ್ದರ ಫಲ.

ಚಾರುದತ್ತ ಏನು? ಅವಳೂ ನನ್ನಲ್ಲಿ ದಯೆ ತೋರೋ ಹಾಗಾಯ್ತೆ? ಈಗ ನಾನು ನಿಜವಾಗಿ ದರಿದ್ರನಾದೆ. ಸ್ತ್ರೀಯ ಹಣದಿಂದ ಜೀವಿಸೋ ವ್ಯಕ್ತಿ ಪುರುಷ ನಾಗಿದ್ದರೂ ಅಬಲನೇ. (ಯೋಚಿಸಿ) ಇಲ್ಲ, ಇಲ್ಲ, ಸಂಪತ್ತಿಗೆ ಮಾರು ಹೋಗದ ಹೆಂಡತಿ, ಕಷ್ಟಕ್ಕೆ ಸೊಪ್ಪುಹಾಕದ ನಿನ್ನಂಥ ಮಿತ್ರ, ಸತ್ಯಕ್ಕೆ ಹೊರತಾಗದ ಬಾಳುವೆ ಇವೆಲ್ಲ ಇದ್ದವನು ದರಿದ್ರ ಹೇಗಾದಾನು ಮೈತ್ರೇಯ ?

ವಿದೂಷಕ ಏನು ಮಿತ್ರ ?

ಚಾರುದತ್ತ ಈ ರತ್ನಹಾರ ತಗೊಂಡು ವಸಂತಸೇನೆಯ ಮನೆಗೆ ಹೋಗು. ನೀವು ನಮ್ಮಲ್ಲಿ ಇಟ್ಟ ಒಡವೆಯನ್ನ ನಮ್ಮದು ಅಂತ ಭಾವಿಸಿ ಚಾರುದತ್ತ ಜೂಜಿನಲ್ಲಿ ಸೋತುಬಿಟ್ಟ. ಅದಕ್ಕೆ ಪ್ರತಿಯಾಗಿ ಈ ಹಾರ ಕಳಿಸಿದಾನೆ ಅಂತ ತಿಳಿಸಿ ಇದನ್ನು ಆಕೆಗೆ ಒಪ್ಪಿಸಿ ಬಾ.

ವಿದೂಷಕ ಸರಿಹೋಯ್ತು ! ತಿಂದದ್ದಲ್ಲ, ಉಂಡದ್ದಲ್ಲ. ಜೊತೆಗೆ ಸ್ವಲ್ಪ ಬೆಲೆಯದ್ದು ಅದೂ ಕಳ್ಳರು ಕದ್ದು ಹೋದದ್ದು. ಅದಕ್ಕೆ ಇಂಥ ಅಮೂಲ್ಯ ಹಾರ ಕೊಟ್ಟುಬಿಡೋದೆ ? ಖಂಡಿತ ಕೂಡದು.

ಚಾರುದತ್ತ ಛೆ, ಹಾಗನ್ನಬೇಡ. ಇದನ್ನು ಕೊಡ್ತಿರೋದು ಅವಳ ಒಡವೆಗೆ ಪ್ರತಿಯಾಗಿ ಅಲ್ಲ; ಅವಳು ಯಾವ ನಂಬಿಕೆಯಿಂದ ಒಡವೇನ ನಮ್ಮಲ್ಲಿ ಇಟ್ಟಳೋ ಆ ನಂಬಿಕೆಗಾಗಿ. ನೀನು ಇದನ್ನು ಅವಳಿಗೆ ಒಪ್ಪಿಸಲೇಬೇಕು. ಇಲ್ಲದಿದ್ದರೆ ನನ್ನ ಮೇಲೆ ಆಣೆಯಿದೆ ನೋಡು !

ವಿದೂಷಕ ಆಯಿತಪ್ಪ !

(ಹೋಗುವನು)

• • • •

# ನಾಲ್ಕನೆಯ ಅಂಕ

(ವಸಂತಸೇನೆ ಮದನಿಕೆಯರ ಪ್ರವೇಶ)

| | |
|---|---|
| ವಸಂತಸೇನೆ | ಮದನಿಕೆ, ಚಾರುದತ್ತನ ಈ ಭಾವಚಿತ್ರ ಎಷ್ಟು ಚೆನ್ನಾಗಿದೆ ಅಲ್ಲವೆ ? |
| ಮದನಿಕೆ | ನಿಜ, ತುಂಬ ಚೆನ್ನಾಗಿದೆ. |
| ವಸಂತಸೇನೆ | ಚೆನ್ನಾಗಿದೆ ಅಂತ ನಿನಗೆ ಹೇಗೆ ಗೊತ್ತಾಯ್ತು ? |
| ಮದನಿಕೆ | ನೀನು ಅಷ್ಟು ಪ್ರೀತಿಯಿಂದ ನೋಡ್ತಿರೋ ಚಿತ್ರ ಚೆನ್ನಾಗಿರಲೇಬೇಕು ಅನ್ನಿಸ್ತು. |
| ವಸಂತಸೇನೆ | ಸೂಳೆಗೇರಿ ಜನಕ್ಕೆ ಸಹಜವಾದ ಚಾತುರ್ಯದಿಂದ ಈ ಮಾತು ಹೇಳ್ತಿದೀಯೋ ಹೇಗೆ ? |
| ಮದನಿಕೆ | ಚೆನ್ನಾಯ್ತು ಅಕ್ಕ ! ಸೂಳೆಗೇರೀಲಿ ಇರೋ ಜನವೆಲ್ಲ ಸುಳ್ಳಾಡೋ ಜನವೆ ? |
| ವಸಂತಸೇನೆ | ಸೂಳೆಯರಿಗೆ ಸಂಬಂಧ ಜಾಸ್ತಿ. ಅದರಿಂದ ಸುಳ್ಳು, ವಂಚನೆ ತಾನಾಗಿ ಬರುತ್ತೆ. |
| ಚೇಟಿ | (ಬಂದು) ಅಮ್ಮ, ನಿಮ್ಮ ತಾಯಿ ಹೇಳಿದಾರೆ. ರಥ ಸಿದ್ಧವಾಗಿದೆ ಹೊರಡಬೇಕಂತೆ. |
| ವಸಂತಸೇನೆ | (ಉತ್ಸುಕತೆಯಿಂದ) ಏನು, ಚಾರುದತ್ತ ರಥ ಕಳಿಸಿದಾನೆಯೆ ? |
| ಚೇಟಿ | ಇಲ್ಲ, ಬೇರೆ ಯಾರೋ ಹತ್ತು ಸಾವಿರ ವರಹ ಸಹಿತ ಕಳಿಸಿದ್ದಾರೆ. |
| ವಸಂತಸೇನೆ | ಯಾರದು ? |
| ಚೇಟಿ | ರಾಜನ ಮೈದುನ ಶಕಾರನಿಲ್ಲವೆ ? ಅವನು. |
| ವಸಂತಸೇನೆ | (ಸಿಟ್ಟಿನಿಂದ) ಛಿ ! ಹೋಗು ಆಚೆ ! ಇನ್ನೊಮ್ಮೆ ಇಂಥ ಮಾತು ಆಡಿಗೀಡೀಯ ! |
| ಚೇಟಿ | ಕ್ಷಮಿಸಿ ಅಮ್ಮ. ನಿಮ್ಮ ತಾಯಿ ಹೇಳಿದ್ದನ್ನು ತಿಳಿಸಿದೆ, ಅಷ್ಟೆ. |
| ವಸಂತಸೇನೆ | ನಾನೂ ತಾಯಿ ಮಾತಿಗೇ ಕೋಪಿಸ್ಕೊಂಡೆ. |
| ಚೇಟಿ | ತಾಯಿಯವರಿಗೆ ಏನು ತಿಳಿಸಲಿ ? |
| ವಸಂತಸೇನೆ | ನಾನು ಬದುಕಿರಬೇಕು ಅಂತ ಇಷ್ಟ ಇದ್ದರೆ ಇನ್ನೊಂದು ಸಲ ಹೀಗೆ ಹೇಳಬಾರದಂತೆ ಅಂತ ತಿಳಿಸು. |
| ಚೇಟಿ | ಆಗಲಿ ಅಮ್ಮ (ಹೋಗುವಳು) |
| | (ವಸಂತಸೇನೆ ಕಿಟಕಿಯ ಬಳಿ ಕುಳಿತು ಹಾಡಿಕೊಳ್ಳುತ್ತಿರುವಳು) |
| ಶರ್ವಿಳಕ | (ಮನೆಯ ಹೊರಗೆ ಒಂದು ಮೂಲೆಯಲ್ಲಿ ನಿಂತು) ಈ ಮದನಿಕೆ ಸಲುವಾಗಿ ನಿನ್ನೆ ರಾತ್ರಿ ಎಂಥ ಸಾಹಸಕ್ಕೆ ಕೈಹಾಕಿಬಿಟ್ಟೆ. ಇದೇ ವಸಂತಸೇನೆಯ ಮನೆ. ಮದನಿಕೆ ಈ ಮನೇಲಿ ಎಲ್ಲಿದಾಳೊ ಏನೋ ? ಅವಳನ್ನು ಹೇಗೆ ಕಾಣೋದು ? |

(ಮದನಿಕೆ ಹೊರಗಿನಿಂದ ಬರುವಳು)

ಶರ್ವಿಳಕ — ಅಗೊ, ಇಲ್ಲೆ ಬರ್‍ತಿದಾಳಲ್ಲ ! (ಆ ಕಡೆ ಚಲಿಸುವನು)

ಮದನಿಕೆ — ಓಹೋ ಶರ್ವಿಳಕ ! ಇದೇನು, ಯಾವಾಗ ಬಂದೆ ?

(ಇಬ್ಬರೂ ಮಾತಾಡುತ್ತ ನಿಲ್ಲುವರು)

ವಸಂತಸೇನೆ — (ಕಿಟಕಿಯ ಬಳಿ ಕೂತಿದ್ದವಳು ಹೊರಗಿರುವ ಇಬ್ಬರನ್ನೂ ನೋಡಿ) ಇದೇನು ? ಮದನಿಕೆ ಯಾರೋ ಗಂಡಸಿನೊಡನೆ ಮಾತಾಡ್ತಿದಾಳೆ ? ಬಹಳ ಆಪ್ತವಾಗಿ ಮಾತಾಡ್ತಿರೋ ಹಾಗಿದೆ ! ಅವನು ಯಾರೋ ! ಇವಳನ್ನು ದಾಸೀವೃತ್ತಿಯಿಂದ ಬಿಡಿಸಿ ಜೊತೆಗಾತಿ ಮಾಡಿಕೋತೀನಿ ಅಂತ ಮಾತು ಕೊಟ್ಟಿದಾನೋ ಏನೋ, ಸುಖವಾಗಿರಲಿ, ನನ್ನಿಂದ ಯಾರ ಸಂತೋಷವೂ ಹಾಳಾಗದೆ ಇರಲಿ.

ಮದನಿಕೆ — ಅದೇನು, ಹೇಳು ಶರ್ವಿಳಕ.

ಶರ್ವಿಳಕ — (ಗಾಬರಿಯಿಂದ ಬೇರೆ ಯಾರಾದರೂ ಇದ್ದಾರೋ ಎಂದು ಎಲ್ಲ ಕಡೆ ಕಣ್ಣು ಹೊರಳಿಸುತ್ತಾನೆ)

ಮದನಿಕೆ — ಯಾಕೆ ಇಷ್ಟು ಭಯ ನಿನಗೆ ?

ಶರ್ವಿಳಕ — ಒಂದು ಗುಟ್ಟು ಮಾತು ಹೇಳಬೇಕಾಗಿದೆ. ಇಲ್ಲಿ ಯಾರೂ ಇಲ್ಲ ತಾನೆ ?

ವಸಂತಸೇನೆ — ಏನೊ ಗುಟ್ಟು ಮಾತಂತೆ. ನಾನು ಯಾಕೆ ಕೇಳಬೇಕು ? ಹೊರಡ್ತೀನಿ (ಹೋಗಲು ಎದ್ದು ನಿಲ್ಲುವಳು)

ಶರ್ವಿಳಕ — ಮದನಿಕೆ, ಕೊಡಬೇಕಾದ ಹಣ ಕೊಟ್ಟರೆ ವಸಂತಸೇನೆ ನಿನ್ನನ್ನು ಬಿಡ್ತಾಳೆ ತಾನೆ ?

ವಸಂತಸೇನೆ — (ಸ್ವಗತ) ಏನೋ ನನ್ನ ಮಾತೇ ನಡೀತಾ ಇದೆ ! ಯಾಕೆ ಕೇಳಿಸಿಕೊಳ್ಳ ಬಾರದು ? (ಮರೆಯಲ್ಲಿ ನಿಂತು ಕಿವಿಗೊಟ್ಟು ಆಲಿಸುತ್ತಾಳೆ)

ಮದನಿಕೆ — ನನ್ನನ್ನು ಕಳಿಸಿಕೊಡ್ತೀರಾ ಅಂತ ಕೇಳಿದರೆ, ಅದು ಅವಳಿಗೆ ಇಷ್ಟವಾದರೆ, ಹಣ ಕೊಡದೆಯೇ ಬಿಟ್ಟುಕೊಟ್ಟಾಳು. ಅದು ಇರಲಿ, ನನ್ನನ್ನು ಬಿಡಿಸುವಷ್ಟು ಹಣ ನಿನಗೆ ಎಲ್ಲಿಂದ ಬಂತು ?

ಶರ್ವಿಳಕ — ನನಗೆ ನೀನೆಂದರೆ ಪ್ರಾಣ. ಆದರೆ ಬಿಡಿಸಿಕೊಳ್ಳೋದಕ್ಕೆ ಹಣ ಮಾತ್ರ ಗತಿಯಿಲ್ಲ. ಹೀಗಾಗಿ ತುಂಬ ಧೈರ್ಯ ಮಾಡಿ ನಿನ್ನೆ ರಾತ್ರಿ ಒಂದು ಸಾಹಸ ಮಾಡಿಬಿಟ್ಟೆ.

ವಸಂತಸೇನೆ — (ಸ್ವಗತ) ನೋಡೋದಕ್ಕೆ ಇವನು ಎಷ್ಟು ಸೌಮ್ಯನಾಗಿದಾನೆ. ಆದರೆ ಸಾಹಸದ ವಿಷಯ ಕೇಳಿ ಭಯವಾಗ್ತಿದೆ.

ಮದನಿಕೆ — ಹೆಣ್ಣಿಗೋಸ್ಕರ ಎರಡನ್ನೂ ಹಾಳುಮಾಡಿಕೊಂಡೆಯಲ್ಲ.

ಶರ್ವಿಳಕ — ಯಾವುದನ್ನು ?

ಮದನಿಕೆ — ದೇಹ ನಡತೆ ಎರಡನ್ನೂ.

ಶರ್ವಿಳಕ — ಅಯ್ಯೋ ಪೆದ್ದಿ ! ಸಾಹಸ ಮಾಡದಿದ್ದರೆ ಹಣ ಸಿಗುತ್ತೆ ?

ಮದನಿಕೆ — ಇದುವರೆಗೆ ತುಂಬ ಯಶೋವಂತನಾಗಿದ್ದೆ. ನನ್ನಂಥವಳಿಗಾಗಿ ಇಂಥ ಸಾಹಸ ಮಾಡಿದ್ದು ಎಷ್ಟೂ ಸರಿಯಲ್ಲ.

ಶರ್ವಿಳಕ — ಯಾಕೆ ಹಾಗೆ ಹೇಳ್ತಿ ಮದನಿಕೆ ? ನಾನು ಒಡವೆಗೆ ಆಸೆಪಟ್ಟು ಆಭರಣ ತೊಟ್ಟ ಹೆಣ್ಣನ್ನು ಹಾರಿಸಲಿಲ್ಲ. ಬ್ರಾಹ್ಮಣನ ಸೊತ್ತಿಗೆ ಕಣ್ಣಿಡಲಿಲ್ಲ. ಮಕ್ಕಳ ಮೈಯಲ್ಲಿದ್ದ ಒಡವೆ ಕದ್ದು ಅವರಿಗೆ ಕೇಡು ಮಾಡಲಿಲ್ಲ. ಕಳ್ಳತನದಲ್ಲೂ ಔಚಿತ್ಯಕ್ಕೆ ಹೊರತಾಗಿ ನಡೆದಿಲ್ಲ. "ಇದು ನಿಮ್ಮ ಮೈಗೆ ಚೆನ್ನಾಗಿ ಹೊಂದುತ್ತೆ. ವಿಶ್ವಾಸವಿಟ್ಟು ಧರಿಸಬೇಕು. ಆದರೆ ಗುಟ್ಟಾಗಿರಲಿ" ಅಂತ ನಿನ್ನ ಯಜಮಾನಿಗೆ ತಿಳಿಸು.

ಮದನಿಕೆ — ಯಾಕೆ ಗುಟ್ಟಾಗಿರಬೇಕು ? ಅದೇನು ತೋರಿಸು. ನೋಡ್ತೀನಿ.

ಶರ್ವಿಳಕ — ನೋಡ್ತೀಯ, ಇಗೋ ನೋಡು (ತೋರಿಸುವನು)

ಮದನಿಕೆ — ಈ ಒಡವೇನ ನಾನು ಎಲ್ಲೋ ನೋಡಿದ ಹಾಗಿದೆಯಲ್ಲ ! ಇದು ಎಲ್ಲಿ ಸಿಕ್ಕಿತು ?

ಶರ್ವಿಳಕ — ನಿನಗೆ ಅದೆಲ್ಲ ಯಾಕೆ ? ಸುಮ್ಮನೆ ತಗೋ.

ಮದನಿಕೆ — (ಸಿಟ್ಟಿನಿಂದ) ನನ್ನಲ್ಲಿ ಅಷ್ಟು ನಂಬಿಕೆ ಇಲ್ಲದ ಮೇಲೆ ನನ್ನನ್ನು ಬಿಡಿಸಿ ಕೊಳ್ಳೋದು ಯಾಕೆ ?

ಶರ್ವಿಳಕ — ಆಯಿತು, ನಿನ್ನ ಹತ್ತಿರ ಏನು ಮುಚ್ಚುಮರೆ ? ನಾನು ಒಡವೆ ತಂದದ್ದು ಚಾರುದತ್ತನ ಮನೆಯಿಂದ ಅಂತ ನನಗೆ ಮಾರನೆ ದಿನ ಗೊತ್ತಾಯ್ತು.

(ಮದನಿಕೆ ವಸಂತಸೇನೆ ಇಬ್ಬರೂ ಗಾಬರಿಯಾಗುವರು)

ಮದನಿಕೆ — ಅಯ್ಯೋ ! ಎಂಥ ಕೆಲಸ ಮಾಡಿಬಿಟ್ಟೆ !

ಶರ್ವಿಳಕ — ಸಮಾಧಾನ ಮಾಡಿಕೊ ಮದನಿಕೆ. ಯಾಕೆ ಇಷ್ಟು ಪೆಚ್ಚಾಗಿಬಿಟ್ಟೆ ? ನಿನ್ನನ್ನು ಬಿಡಿಸಿಕೊಂಡು ಹೋಗೋದಕ್ಕೆ ನಾನು ಏನೆಲ್ಲ ಸಾಹಸ ಮಾಡಿದೆ. "ಅಯ್ಯೋ, ಪಾಪ ! ನನಗೋಸ್ಕರ ಎಷ್ಟೊಂದು ಕಷ್ಟಪಟ್ಟ" ಅಂತ ಒಂದು ಒಳ್ಳೆ ಮಾತು ಸಹ ಆಡದೆ ಹೀಗೆ ದುಃಖಪಡ್ತಾರಾ ?

ಮದನಿಕೆ — ಅಲ್ಲಿ ನೀನು ಯಾರನ್ನೂ ಕೊಲ್ಲಲಿಲ್ಲ ತಾನೆ ?

ಶರ್ವಿಳಕ — ಮಲಗಿದೋರನ್ನ, ಭಯಪಡೋರನ್ನ ಈ ಶರ್ವಿಳಕ ಎಂದೂ ಕೊಲ್ಲೋದಿಲ್ಲ.

ಮದನಿಕೆ — ಖಂಡಿತ ತಾನೆ ?

ಶರ್ವಿಳಕ — ಖಂಡಿತ.

ವಸಂತಸೇನೆ — ಅಮ್ಮಯ್ಯ ! ಸದ್ಯ, ಬದುಕಿದೆ !

ಮದನಿಕೆ — ಸದ್ಯ, ಜೀವ ಬಂದ ಹಾಗಾಯ್ತು.

ಶರ್ವಿಲಕ — ಛಿ! ಹೆಂಗಸರನ್ನ ನಂಬಲೇಬಾರದು. ಅಲ್ಲ, ಉತ್ತಮ ಕುಲದಲ್ಲಿ ಹುಟ್ಟಿದ ನಾನು ನಿನ್ನ ಸಲುವಾಗಿ ಕಳ್ಳತನದಂಥ ಕೆಟ್ಟ ಕೆಲಸಕ್ಕೆ ಕೈಹಾಕಿದೆ. ಅಂಥ ನನ್ನ ಬಗ್ಗೆ ಒಂದೇ ಒಂದು ಪ್ರೀತಿ ಮಾತು ಆಡದೆ ಯಾರದ್ದೋ ಕ್ಷೇಮಕ್ಕೆ ಇಷ್ಟು ಒದ್ದಾಡ್ತೀಯ! ಹೆಣ್ಣೇ ಹೀಗೆ. ಮಹಾಚಂಚಲೆ. ಕಪಟಿ! ಅವಳಿಗೆ ಬೇಕಾದ್ದು ಗಂಡಸಲ್ಲ. ಅವನ ಹಣ! (ಸಿಟ್ಟಿನಿಂದ) ಇದೆಲ್ಲ ಆ ಚಾರುದತ್ತನ ಕೆಲಸ. ತಾಳು ಅವನಿಗೆ ಸರಿಯಾದ ಶಾಸ್ತಿ ಮಾಡ್ತೀನಿ! (ಹೊರಡಲು ಪ್ರಯತ್ನಿಸುತ್ತಾನೆ)

ಮದನಿಕೆ — (ಅವನನ್ನ ನಿಲ್ಲಿಸಿ) ಇದೇನು ಶರ್ವಿಲಕ ಹಿಂದೆ ಮುಂದೆ ಏನೂ ತಿಳೀದೆ ಕೋಪಮಾಡಿಕೊಂಡು ಬಾಯಿಗೆ ಬಂದಂತೆ ಮಾತಾಡ್ತಿ?

ಶರ್ವಿಲಕ — ಏನದು, ನನಗೆ ತಿಳೀದೆ ಇರೋದು?

ಮದನಿಕೆ — ನೀನು ತಂದಿರೋ ಒಡವೆ ನಮ್ಮ ಯಜಮಾನೀದು ಅನ್ನೋ ವಿಷಯ.

ಶರ್ವಿಲಕ — ಅದು ಹೇಗೆ ನಿಮ್ಮ ಯಜಮಾನೀದು?

ಮದನಿಕೆ — ಇದನ್ನ ವಸಂತಸೇನೆ ಚಾರುದತ್ತನಿಗೆ ಕೊಟ್ಟಿದ್ದು ನನಗೆ ಗೊತ್ತು.

ಶರ್ವಿಲಕ — ಅಯ್ಯೋ. ದೇವರೆ! ಎಂಥ ಅಕಾರ್ಯ ಮಾಡಿಬಿಟ್ಟೆ ನಾನು!

ವಸಂತಸೇನೆ — ಇವನು ತನ್ನ ಕೆಲಸಕ್ಕೆ ಪಶ್ಚಾತ್ತಾಪ ಪಡುವಂತೆ ಕಾಣುತ್ತೆ. ತಿಳಿಯದೆ ಮಾಡಿದನೊ ಏನೊ?

ಶರ್ವಿಲಕ — ಈಗ ಕೆಲಸ ಕೈಮೀರಿತಲ್ಲ ಮದನಿಕೆ. ಏನು ಮಾಡಬೇಕು ಅಂತ ತಿಳಿಸು.

ಮದನಿಕೆ — ನೀನು ಹೆಚ್ಚು ತಿಳಿದವನು. ನೀನೇ ಹೇಳಬೇಕು.

ಶರ್ವಿಲಕ — ಹಾಗಲ್ಲ, ಹೆಣ್ಣು ಸ್ವಭಾವದಿಂದಲೇ ಪಂಡಿತೆ. ಗಂಡಸಿಗೆ ಕಲಿಯುವ ಪಾಂಡಿತ್ಯ ಬರಲ್ಲ. ನೀನೆ ಹೇಳು.

ಮದನಿಕೆ — ನನ್ನ ಮಾತು ಕೇಳೋದಾದ್ರೆ ಒಡವೇನ ಚಾರುದತ್ತನಿಗೇ ಒಪ್ಪಿಸಿಬಿಡು.

ಶರ್ವಿಲಕ — ಚಾರುದತ್ತ ನ್ಯಾಯಾಲಯಕ್ಕೆ ತಿಳಿಸಿಬಿಟ್ಟರೆ?

ಮದನಿಕೆ — ಛೆ ಛೆ! ಎಲ್ಲಾದರೂ ಚಂದ್ರನಿಂದ ಬಿಸಿಲು ಹುಟ್ಟೋದು ಸಾಧ್ಯವೆ?

ವಸಂತಸೇನೆ — ಭಲೆ ಮದನಿಕೆ. ಎಷ್ಟು ಸತ್ಯವಾದ ಮಾತು ಹೇಳಿದೆ!

ಶರ್ವಿಲಕ — ನಾನೇನು ರಾಜನಿಗೂ ಹೆದರೋ ಮನುಷ್ಯನಲ್ಲ. ಆದ್ದರಿಂದ ಭಯದ ಪ್ರಶ್ನೆ ಇಲ್ಲ. ಆದರೆ ಯಾರ ಒಡವೆ ಕದ್ದೆನೋ ಅವರ ಮನೆಗೇ ಹೋಗಿ ವಾಪಸ್ಸು ಕೊಡೋದೆಂದರೆ ನನ್ನಿಂದ ಸಾಧ್ಯ ಇಲ್ಲ. ಬೇರೆ ಏನಾದರೂ ಉಪಾಯ ಯೋಚಿಸು.

ಮದನಿಕೆ — ಒಂದು ಕೆಲಸ ಮಾಡ್ತೀಯ? ನೀನು ಚಾರುದತ್ತನ ಕಡೆಯ ಮನುಷ್ಯ. ನಿಮ್ಮ ಒಡವೆಯನ್ನ ನಿಮಗೆ ತಲುಪಿಸೋದಕ್ಕೆ ಚಾರುದತ್ತ ಕಳಿಸಿದಾನೆ ಅಂತ ಹೇಳಿ ಇದನ್ನ ನಮ್ಮ ಯಜಮಾನೀಗೆ ಕೊಟ್ಟುಬಿಡು.

ಶರ್ವಿಲಕ — ಅದರಿಂದ ಪ್ರಯೋಜನ ಏನಿದೆ?

ಮದನಿಕೆ — ನಿನಗೆ ಕಳ್ಳ ಅನ್ನೋ ಕೆಟ್ಟ ಹೆಸರು ತಪ್ಪುತ್ತೆ. ಚಾರುದತ್ತ ಒಡವೇನ ಹಿಂತಿರುಗಿಸಿದ ಹಾಗಾಗುತ್ತೆ. ಒಡವೆ ವಾರಸುದಾರರಿಗೇ ಸೇರುತ್ತೆ.

ಶರ್ವಿಲಕ — ಭಲೆ ಮದನಿಕೆ! ಒಳ್ಳೆ ಉಪಾಯ ಇದು. ಸದ್ಯ ಬದುಕಿದೆ!

ಮದನಿಕೆ — ನೀನು ಇಲ್ಲೇ ಕೂತಿರು. ನೀನು ಬಂದಿದೀಯ ಅಂತ ಯಜಮಾನಿಗೆ ತಿಳಿಸಿ ಬರ್ತೀನಿ.

ಶರ್ವಿಲಕ — ಆಯಿತು ಹೋಗಿ ಬಾ.

(ವಸಂತಸೇನೆ ಮರೆಯಾಗಿ ನಿಂತಿದ್ದ ಜಾಗದಿಂದ ಬೇರೆ ಸ್ಥಳಕ್ಕೆ ಬಂದು ಕುಳಿತುಕೊಳ್ಳುವಳು)

ಮದನಿಕೆ — (ವಸಂತಸೇನೆಯ ಹತ್ತಿರ ಬಂದು) ಅಕ್ಕ, ಚಾರುದತ್ತನ ಕಡೆಯಿಂದ ಒಬ್ಬ ಬ್ರಾಹ್ಮಣ ಬಂದಿದಾನೆ.

ವಸಂತಸೇನೆ — ಚಾರುದತ್ತನ ಕಡೆಯವನೇ ಅಂತ ನಿನಗೆ ಹೇಗೆ ಗೊತ್ತು?

ಮದನಿಕೆ — ನಮ್ಮ ಮನೆಯವರನ್ನ ನಾನು ಕಾಣೆನೇ ಅಕ್ಕ?

ವಸಂತಸೇನೆ — (ತಲೆಯಲ್ಲಾಡಿಸುತ್ತ ನಕ್ಕು) ಸರಿಯಾಗಿ ಹೇಳಿದೆ. ಕರೆದುಕೊಂಡು ಬಾ.

(ಮದನಿಕೆ ಹೊರಗೆ ಹೋಗಿ ಶರ್ವಿಲಕನ ಜೊತೆ ಮತ್ತೆ ಬರುತ್ತಾಳೆ)

ಶರ್ವಿಲಕ — ಆರ್ಯೆ. ನಿನಗೆ ಒಳ್ಳೆಯದಾಗಲಿ.

ವಸಂತಸೇನೆ — ನಮಸ್ಕಾರ, ಬನ್ನಿ ಕುಳಿತುಕೊಳ್ಳಿ.

ಶರ್ವಿಲಕ — ನನ್ನ ಮನೆ ತುಂಬ ಜೀರ್ಣವಾಗಿ ಒಡವೆ ಭದ್ರವಾಗಿಡೋದು ಅಸಾಧ್ಯ. ಆದ್ದರಿಂದ ನಿಮ್ಮ ವಸ್ತು ನೀವೇ ಇಟ್ಟುಕೋಬೇಕು ಅಂತ ತಿಳಿಸಿ ಚಾರುದತ್ತ ಈ ಒಡವೆ ಕಳಿಸಿದಾನೆ. ತಗೊಳ್ಳಿ (ಒಡವೆಗಳನ್ನ ಮದನಿಕೆಗೆ ಕೊಟ್ಟು) ನಾನು ಬರ್ತೀನಿ. (ಹೊರಡುತ್ತಿರುವನು)

ವಸಂತಸೇನೆ — ಅಯ್ಯಾ ನಿಲ್ಲು. ಚಾರುದತ್ತನಿಗೆ ಹೇಳಿಕೊಡಬೇಕಾದ ಒಂದು ಮಾತಿದೆ.

ಶರ್ವಿಲಕ — (ಸ್ವಗತ) ಇದೇನು ಗ್ರಹಚಾರ ಬಂತಪ್ಪ! (ಪ್ರಕಾಶ) ಅದೇನು ಆರ್ಯೆ?

ವಸಂತಸೇನೆ — ಈ ಮದನಿಕೆಯನ್ನ ಒಪ್ಪಿಸಿಕೊ.

ಶರ್ವಿಲಕ — (ತಬ್ಬಿಬ್ಬಾಗಿ) ನಿನ್ನ ಮಾತು ನನಗೆ ಅರ್ಥ ಆಗ್ತಿಲ್ಲ.

ವಸಂತಸೇನೆ — ನನಗೆ ಆಗಿದೆ.

ಶರ್ವಿಲಕ — ಏನದು?

ವಸಂತಸೇನೆ — ಈ ಒಡವೆಯನ್ನು ಹಿಂತಿರುಗಿಸಿದವನಿಗೆ ಮದನಿಕೆಯನ್ನು ಒಪ್ಪಿಸಬೇಕು ಅಂತ ಚಾರುದತ್ತ ತಿಳಿಸಿದ್ದ.

ಶರ್ವಿಲಕ — (ಸ್ವಗತ) ಎಲಾ! ಇವಳಿಗೆ ನನ್ನ ಗುಟ್ಟೆಲ್ಲ ಗೊತ್ತಾದ ಹಾಗಿದೆಯಲ್ಲ! (ಪ್ರಕಾಶ) ಚಾರುದತ್ತ ಎಂಥ ದೊಡ್ಡ ಮನುಷ್ಯ!

ವಸಂತಸೇನೆ ಮದನಿಕೆ. ನಿನ್ನನ್ನು ಈತನಿಗೆ ಒಪ್ಪಿಸಿದ್ದೇನೆ. ಅವನ ಜೊತೆ ಹೋಗಿ ಸುಖವಾಗಿ ಬಾಳು. ನನ್ನನ್ನು ನೆನೆಸಿಕೊಳ್ಳಿ ತಾನೆ?

ಮದನಿಕೆ (ಕಣ್ಣಲ್ಲಿ ನೀರು ತಂದುಕೊಂಡು) ಆರ್ಯೆ ನನ್ನನ್ನು ದೂರ ಮಾಡಿಬಿಟ್ಟಳು! (ನಮಸ್ಕಾರ ಮಾಡುವಳು)

ವಸಂತಸೇನೆ ಏಳು ಮದನಿಕೆ. ಈಗ ನೀನು ಬ್ರಾಹ್ಮಣನ ಪತ್ನಿ. ಆದ್ದರಿಂದ ನಾನೇ ನಿನಗೆ ನಮಸ್ಕಾರ ಮಾಡಬೇಕು.

ಶರ್ವಿಳಕ ಆರ್ಯೆ ಬರ್ತೇನೆ. ನಿನಗೆ ಒಳ್ಳೆಯದಾಗಲಿ. (ಮದನಿಕೆಯೊಡನೆ ಹೊರಡುತ್ತಿರುವನು. ತೆರೆಯಲ್ಲಿ)

ಕೇಳಿ, ಕೇಳಿ : ಈ ದೇಶಕ್ಕೆ ಆರ್ಯಕ ಎನ್ನುವ ಒಬ್ಬ ಗೊಲ್ಲರ ಹುಡುಗ ದೊರೆಯಾಗುತ್ತಾನೆ ಅಂತ ಒಬ್ಬ ಸಿದ್ಧ ಭವಿಷ್ಯ ಹೇಳಿದ್ದನಷ್ಟೆ. ಆ ಗೊಲ್ಲ ದೇಶದ ಶತ್ರುವೆಂದು ತೀರ್ಮಾನಿಸಿ ದೊರೆಯಾದ ಪಾಲಕ ಮಹಾರಾಜರು ಅವನನ್ನು ಹಳ್ಳಿಯಿಂದ ಹಿಡಿತರಿಸಿ ಸೆರೆಗೆ ಹಾಕಿದ್ದಾರೆ. ನೀವೆಲ್ಲ ನಿಮ್ಮ ನಿಮ್ಮ ಕಾರ್ಯಗಳಲ್ಲಿ ಜಾಗ್ರತರಾಗಿರಬೇಕು.

ಶರ್ವಿಳಕ ಅಯ್ಯಯ್ಯೋ, ಪ್ರಮಾದವಾಯಿತು! ನನ್ನ ಪ್ರೀತಿಯ ಗೆಳೆಯ ಆರ್ಯಕ ಸೆರೆಯಲ್ಲಿದಾನೆಯೆ? ಅವನ ಸಹಾಯಕ್ಕೆ ಹೋಗೋಣವೆಂದರೆ ಈಗಷ್ಟೆ ಸಂಸಾರವನ್ನು ಕಟ್ಟಿಕೊಂಡೆನಲ್ಲ! ಲೋಕದಲ್ಲಿ ನಲ್ಲೆ, ಗೆಳೆಯ ಇವರಿಬ್ಬರೇ ತಾನೆ ಅತ್ಯಂತ ಪ್ರೀತಿಪಾತ್ರರಾದವರು? ಆರ್ಯಕನಲ್ಲಿ ನನಗೆ ಇರೋ ಸ್ನೇಹ ಉಳಿದೆಲ್ಲಕ್ಕಿಂತ ದೊಡ್ಡದು. ಆದ್ದರಿಂದ ಈಗಲೇ ಅವನ ಸಹಾಯಕ್ಕೆ ಹೊರಡ್ತೇನೆ.

ಮದನಿಕೆ ಶರ್ವಿಳಕ, ನನ್ನನ್ನು ಯಾರಾದರೂ ಹಿರಿಯರ ಬಳಿ ಬಿಟ್ಟು ಹೋಗು.

ಶರ್ವಿಳಕ ನಾನು ಯೋಚಿಸಿದ್ದನ್ನೇ ನೀನೂ ಹೇಳಿದೆ. ರೇಭಿಲ ನನಗೆ ಆಪ್ತನಾದ ಮಿತ್ರ. ಅವನ ಬಳಿ ನಿನ್ನನ್ನು ಬಿಟ್ಟು ಹೋಗ್ತೇನೆ.

ಮದನಿಕೆ ನೀನು ಮಾತ್ರ ಸದಾ ಎಚ್ಚರವಾಗಿರು ಶರ್ವಿಳಕ.

ಶರ್ವಿಳಕ ಪಾಲಕನಿಗೆ ಆಗದವರು ಬಹಳ ಜನ ಇದಾರೆ. ಅವರನ್ನೆಲ್ಲ ಪಾಲಕನ ವಿರುದ್ಧ ಎತ್ತಿಕಟ್ಟಿ ನನ್ನ ಸ್ನೇಹಿತನನ್ನು ಬಿಡಿಸ್ತೇನೆ. (ಹೋಗುವನು)

ಚೇಟಿ ಅಮ್ಮ. ಚಾರುದತ್ತನ ಕಡೆಯಿಂದ ಒಬ್ಬ ಬ್ರಾಹ್ಮಣ ಬಂದಿದಾನೆ.

ವಸಂತಸೇನೆ ಇದು ಎಂಥ ಒಳ್ಳೆಯ ದಿನ! ಮೈತ್ರೇಯನನ್ನು ಆದರದಿಂದ ಕರೆದುಕೊಂಡು ಬನ್ನಿ.

ಚೇಟಿ ಆಗಲಿ ಅಮ್ಮ.

ವಿದೂಷಕ (ಒಳಗೆ ಬಂದು. ವಸಂತಸೇನೆಯನ್ನು ನೋಡಿ) ಅಮ್ಮ, ನಿನಗೆ ಒಳ್ಳೆಯದಾಗಲಿ!

| | |
|---|---|
| ವಸಂತಸೇನೆ | ಓಹೋ ! ಮೈತ್ರೇಯ, ಬಂದೆಯಾ (ಬೇಗನೆ ಎದ್ದು) ಆರೋಗ್ಯ ತಾನೆ ? ಕುಳಿತುಕೊ (ಪೀಠವನ್ನು ತೋರಿಸುವಳು) |
| ವಿದೂಷಕ | ನೀನೂ ಕುಳಿತುಕೊ ವಸಂತಸೇನೆ. (ಇಬ್ಬರೂ ಕೂರುವರು) |
| ವಸಂತಸೇನೆ | ಚಾರುದತ್ತ ಕ್ಷೇಮವೆ ? |
| ವಿದೂಷಕ | ಕ್ಷೇಮ. |
| ವಸಂತಸೇನೆ | ಅದೇನು ಇಷ್ಟುದೂರ ಬಂದದ್ದು ಮೈತ್ರೇಯ ? |
| ವಿದೂಷಕ | ಅಮ್ಮ, ' ನೀನು ಕೊಟ್ಟ ಒಡವೆಯನ್ನು ನಮ್ಮದೇ ಅಂತ ಭಾವಿಸಿ ಜೂಜಿನಲ್ಲಿ ಸೋತುಬಿಟ್ಟೆ. ಒಡವೆ ತೆಗೆದುಕೊಂಡ ಜೂಜುಗಾರ ಎಲ್ಲಿ ಹೋದನೋ ತಿಳೀಲಿಲ್ಲ ' ಅಂತ ತಿಳಿಸಿ ಬರಲು ಚಾರುದತ್ತ ನನ್ನನ್ನು ಇಲ್ಲಿಗೆ ಕಳಿಸಿದ. |
| ಚೇಟಿ | ಅಮ್ಮ, ಅದೃಷ್ಟಕ್ಕೆ ಮಿತಿಯೇ ಇಲ್ಲ, ಚಾರುದತ್ತ ಜೂಜುಗಾರರಾದರಂತೆ. |
| ವಸಂತಸೇನೆ | (ಸ್ವಗತ) ಒಡವೆ ಕಳುವಾಗಿದ್ದರೂ ತಾನು ಕಳೆದೆ ಅಂತ ಹೇಳ್ತಾನಲ್ಲ, ಎಂಥ ದೊಡ್ಡ ಮನುಷ್ಯ ! ಅದರಿಂದಲೇ ನನಗೆ ಅವನಲ್ಲಿ ಅಷ್ಟು ಪ್ರೇಮ. (ಪ್ರಕಾಶ) ಆಮೇಲೆ ? |
| ವಿದೂಷಕ | ಆ ಒಡವೆಗೆ ಬದಲಾಗಿ ಈ ರತ್ನಹಾರ ತಗೋಬೇಕು ಅಂತ ಚಾರುದತ್ತ ತಿಳಿಸಿದಾನೆ. |
| ವಸಂತಸೇನೆ | (ಸ್ವಗತ) ಒಡವೆಯನ್ನು ತೋರಿಸಿಬಿಡಲೆ ? (ಯೋಚಿಸಿ) ಈಗ ಬೇಡ. |
| ವಿದೂಷಕ | ಏನು ? ರತ್ನಹಾರ ತಗೊಳ್ಳೋದಿಲ್ವೆ ? |
| ವಸಂತಸೇನೆ | (ನಕ್ಕು ಸಖಿಯ ಮುಖ ನೋಡುತ್ತ) ತಗೊಳ್ಳದೆ ಏನು ಮೈತ್ರೇಯ (ಹಾರ ತೆಗೆದುಕೊಂಡು) ಸಂಜೆ ನಾನು ಬಂದು ನೋಡ್ತೇನೆ ಅಂತ ನಿಮ್ಮ ಆ ಜೂಜುಗಾರರಿಗೆ ಹೇಳು. |
| ವಿದೂಷಕ | (ಸ್ವಗತ) ಈ ಹಾರವೂ ಸಾಲದು ಅಂತ ಕಾಣುತ್ತೆ. ಅವನಿಂದ ಇನ್ನೂ ಏನೇನು ಸೆಳೆಯಬೇಕೋ ! (ಪ್ರಕಾಶ) ಆಗಲಿ ಹೇಳ್ತೀನಿ (ತನ್ನಷ್ಟಕ್ಕೆ) ಇನ್ನು ಮುಂದೆ ಈ ವೇಶ್ಯೆಯರ ಸಹವಾಸ ಬಿಟ್ಟು ಬಿಡು ಅಂತ. |
| ವಸಂತಸೇನೆ | (ಚೇಟಿಗೆ) ಈ ರತ್ನಹಾರ ತೆಗೆದಿಟ್ಟುಕೊ. ಚಾರುದತ್ತನನ್ನು ನೋಡೋದಕ್ಕೆ ಹೋಗೋಣ. |
| ಚೇಟಿ | (ಬಂದು) ಅಮ್ಮ, ಅಲ್ಲಿ ನೋಡಿ. ಅಕಾಲದಲ್ಲಿ ಮೋಡ ದಟ್ಟವಾಗ್ತಾ ಇದೆ. |
| ವಸಂತಸೇನೆ | (ಸ್ವಗತ) ಮೋಡ ಸೇರಲಿ, ಕತ್ತಲಾಗಲಿ, ಬೇಕಾದಷ್ಟು ಮಳೆ ಸುರೀಲಿ, ಮನಸ್ಸು ನನ್ನವನನ್ನು ಬಯಸಿರೋವಾಗ ನಾನು ಇದನ್ನೆಲ್ಲ ಲೆಕ್ಕಿಸೋದೇ ಇಲ್ಲ. (ಪ್ರಕಾಶ) ರತ್ನಹಾರ ತೆಗೆದುಕೊಂಡು ಜಾಗ್ರತೆ ಬಾ. |

* * * *

## ಐದನೆಯ ಅಂಕ

**ವಿದೂಷಕ** — ಅಬ್ಬಬ್ಬಬ್ಬ ! ಸೂಳೆಯರದು ಎಂಥ ಜಿಪುಣತನ ! ಇಷ್ಟಾದರೂ ದಾಕ್ಷಿಣ್ಯ ಅನ್ನೋದು ಬೇಡವೆ ? ಪ್ರೀತಿಯಿಂದ ಮಾತಾಡುತ್ತಲೇ ಹಾರ ತೆಗೆದು ಕೊಂಡು ಬಿಟ್ಟಳಲ್ಲ ! ಹೋಗಲಿ, ನನ್ನನ್ನಾದರೂ ಚೆನ್ನಾಗಿ ನಡೆಸಿಕೊಳ್ಳಬೇಡವೆ ? ಕೊಳ್ಳೆ ಹೋಗುವಷ್ಟು ಐಶ್ವರ್ಯ ಇದೆ. ಆದರೂ "ಅಯ್ಯಾ, ಮೈತ್ರೇಯ ಕುಳಿತುಕೊ, ಸುಧಾರಿಸಿಕೊ. ಒಂದು ಬಟ್ಟಲು ನೀರು ತಗೊ" ಅಂತ ಸಹ ಹೇಳಲಿಲ್ಲವಲ್ಲ ! ಇರಲಿ, ಇನ್ನು ಜೀವ ಇರೋವರೆಗೂ ಆ ಹಾಳಾದವಳ ಮುಖ ಸಹ ನೋಡೋದಿಲ್ಲ. ಅಷ್ಟಲ್ಲದೆ ಹೇಳ್ತಾರೆಯೇ—ಕದಿಯದ ಅಕ್ಕಸಾಲೆ, ಮೋಸ ಮಾಡದ ವ್ಯಾಪಾರಿ, ಲೋಭ ಇಲ್ಲದ ಸೂಳೆ ದುರ್ಲಭ ಅಂತ. ಆ ಚಾರುದತ್ತನನ್ನು ಕಂಡು ಸ್ವಲ್ಪ ಬುದ್ಧಿ ಹೇಳ್ತೀನಿ—ಇನ್ನು ಮುಂದಾದರೂ ಇಂಥವರ ಸಹವಾಸ ಬಿಟ್ಟುಬಿಡೊ ಅಂತ. ಅಗೋ ! ಅವನೇ ಈ ಕಡೆ ಬರ್‍ತಿದಾನಲ್ಲ. (ಬರುತ್ತಿರುವ ಚಾರುದತ್ತನ ಹತ್ತಿರ ಹೋಗಿ) ಚಾರುದತ್ತ !

**ಚಾರುದತ್ತ** — ಹೋ ! ಬಂದೆಯಾ ಮೈತ್ರೇಯ ? ಹೋದ ಕೆಲಸ ಆಯ್ತೇನಪ್ಪ ?

**ವಿದೂಷಕ** — ಆಯ್ತು ? ಹಾಳಾಗಿ ಹೋಯ್ತು.

**ಚಾರುದತ್ತ** — ಯಾಕೆ ಮೈತ್ರೇಯ ? ವಸಂತಸೇನೆ ರತ್ನಹಾರ ತಗೊಳ್ಳಲಿಲ್ವೆ ?

**ವಿದೂಷಕ** — ಚೆನ್ನಾಗಿ ಹೇಳಿದೆ ಬಿಡು ! ನಾವು ಅಷ್ಟು ಪುಣ್ಯವಂತರೇನಯ್ಯ ? ಹಾರ ನೋಡಿದ ಕೂಡಲೆ ದಮ್ಮಯ್ಯ ಅಂತ ಕೈಮುಗಿದು ತಗೊಂಡಳು.

**ಚಾರುದತ್ತ** — ಮತ್ತೆ ಕೆಲಸ ಹಾಳಾಯ್ತು ಅಂತ ಹೇಳಿದೆ ?

**ವಿದೂಷಕ** — ಹಾಳಾಗದೆ ಇನ್ನೇನಾಯ್ತಯ್ಯ ಈಗ ? ತಿನ್ನಲಿಲ್ಲ, ಉಣಲಿಲ್ಲ. ಯಾವನೋ ಕಳ್ಳ ಹಾರಿಸಿದ. ಅದೂ ಭಾರಿ ಬೆಲೆದೇನೂ ಅಲ್ಲ. ಅಂಥ ಒಡವೆಗೆ ಎಂಥ ಅದ್ಭೂರಿಯಾದ ಹಾರ ಕೊಟ್ಟುಬಿಟ್ಟೆಯಲ್ಲಯ್ಯ ! ಇದು ಹಾಳು ಅಲ್ಲದಿದ್ರೆ ಇನ್ಯಾವುದು ಹಾಳು ಹೇಳು ?

**ಚಾರುದತ್ತ** — ಛೆ, ಹಾಗೆ ಹೇಳಕೂಡದು. ಯಾವ ನಂಬಿಕೆಯಿಂದ ಅವಳು ನಮ್ಮಲ್ಲಿ ತನ್ನ ಒಡವೆ ಇಟ್ಟು ಹೋದಳೋ ಆ ನಂಬಿಕೆ ಎಲ್ಲಕ್ಕಿಂತ ದೊಡ್ಡದು. ಅದನ್ನು ಉಳಿಸಿಕೊಳ್ಳೋದಕ್ಕೆ ಆ ಹಾರ ಕೊಟ್ಟೆ ಅಷ್ಟೆ.

**ವಿದೂಷಕ** — ನನ್ನ ದುಃಖಕ್ಕೆ ಇನ್ನೂ ಒಂದು ಕಾರಣ ಇದೆ.

**ಚಾರುದತ್ತ** — ಏನು ?

**ವಿದೂಷಕ** — ಅದೇನೋ ತನ್ನ ಸಖಿಗೆ ಸನ್ನೆ ಮಾಡಿ ಸೆರಗಿನಿಂದ ಬಾಯಿ ಮುಚ್ಚಿಕೊಂಡು ನನ್ನಕಡೆ ನೋಡಿ ಮುಸಿ ಮುಸಿ ನಕ್ಕಳು. ನಾನು ಬ್ರಾಹ್ಮಣ. ಆದರೂ

ಪರವಾಗಿಲ್ಲ, ನಿನ್ನ ಕಾಲಿಗೆ ಬಿದ್ದು ಬೇಡಿಕೋತೇನೆ. ಈ ಹಾಳು ಸೂಳೆಯರ ಸಹವಾಸ ಬಿಟ್ಟುಬಿಡು. ಅವರ ವಿಷಯ ನಿನಗೆ ತಿಳೀದು. ಸೂಳೆಯರು ಚಪ್ಪಲಿಯಲ್ಲಿ ಸಿಕ್ಕಿಕೊಂಡ ಮಣ್ಣಿನ ಹೆಂಟೆ ಹಾಗೆ. ಜೀವವನ್ನೇ ಹೀರಿ ಬಿಡ್ತಾರೆ. ಅಷ್ಟಲ್ಲದೆ ಹೇಳ್ತಾರೇನಯ್ಯ, ಶಾನುಭೋಗ, ಸೂಳೆ, ಆನೆ, ಕತ್ತೆ ಇರೋ ಕಡೆ ನೀಚರೂ ಬಾಳಲಾಗರು ಅಂತ ?

ಚಾರುದತ್ತ ಹೋಗಲಿ ಬಿಡು ಮಿತ್ರ. ನೀನು ಅಷ್ಟೆಲ್ಲ ಹೇಳಬೇಕಾದ್ದೇ ಇಲ್ಲ. ಬಡತನವೇ ನಾನು ಅದನ್ನೆಲ್ಲ ಬಿಡೋ ಹಾಗೆ ಮಾಡಿದೆ.

ವಿದೂಷಕ ವಸಂತಸೇನೆ ನಿನಗೆ ತಿಳಿಸೋದಕ್ಕೆ ಹೇಳಿದಾಳಪ್ಪ—ಇವತ್ತು ಸಂಜೆ ಅವಳೇ ಇಲ್ಲಿಗೆ ಬರ್‍ತಾಳಂತೆ. ನನಗೆ ಅನ್ನಿಸತ್ತೆ, ಈಗ ಕೊಟ್ಟಿರೋದು ಸಾಲದೆ ಇನ್ನೂ ಏನೋ ವಸೂಲು ಮಾಡೋದಕ್ಕೆ ಬರ್‍ತಿದಾಳೆ ಅಂತ.

ಚಾರುದತ್ತ ಬರಲಿ ಮೈತ್ರೇಯ. ಸಂತೋಷವಾಗಿ ಬಂದು ಹೋಗಲಿ.

(ಕುಂಭೀಲಕನ ಪ್ರವೇಶ. ಚಾರುದತ್ತ ಮೈತ್ರೇಯರಿಗೆ ಕಾಣದಂತೆ ನಿಲ್ಲುವನು)

ಕುಂಭೀಲಕ ನಾನು ಬರ್‍ತಾ ಇರೋ ವಿಷಯವನ್ನು ತಿಳಿಸು ಅಂತ ವಸಂತಸೇನೆ ಕಳಿಸಿದಾಳೆ. ಚಾರುದತ್ತನ ಜೊತೆ ಈ ಅಧಿಕಪ್ರಸಂಗಿ ಮೈತ್ರೇಯ ಏನೋ ಹರಟ್ತಿದಾನೆ. ಒಳಗೆ ಹೋಗೋಣವೆಂದರೆ ತೋಪಿನ ಬಾಗಿಲು ಹಾಕಿದೆ. ಇರಲಿ ಈ ಶುಷ್ಕವಟುವನ್ನು ಸನ್ನೆಮಾಡಿ ಕರೀತೇನೆ. (ಮಣ್ಣುಹೆಂಟೆ ಆರಿಸಿಕೊಂಡು ಮೈತ್ರೇಯನ ಮೇಲೆ ಎಸೆಯುವನು)

ವಿದೂಷಕ ಅಯ್ಯಯ್ಯೋ ! ಬೇಲಿಯೊಳಗೆ ಇರೋ ಬೇಲದ ಮರಕ್ಕೆ ಕಲ್ಲು ಬೀರೋ ಹಾಗೆ ನನ್ನ ಮೇಲೆ ಮಣ್ಣುಹೆಂಟೆ ಎಸೀತಾ ಇರೋ ನೀಚ ಯಾರು ? (ಅತ್ತ ಇತ್ತ ನೋಡುವನು. ಯಾರೂ ಕಾಣುವುದಿಲ್ಲ)

ಚಾರುದತ್ತ ಮಾಳಿಗೆ ಮೇಲೆ ಆಡ್ತಿರೋ ಪಾರಿವಾಳ ಮಣ್ಣುಹೆಂಟೆ ಕೆಡವಿರಬೇಕು ಅಂತ ಕಾಣುತ್ತೆ.

ವಿದೂಷಕ ಛೀ, ಪಾರಿವಾಳ ! ಮಾಡ್ತೀನಿ ತಾಳು. ಕಳಿತ ಮಾವಿನ ಹಣ್ಣನ್ನು ಉದುರಿಸೋ ಹಾಗೆ ನಿನ್ನನ್ನು ಈ ದೊಣ್ಣೆಯಿಂದ ಬಡಿದು ಕೆಳಕ್ಕೆ ಬೀಳಿಸ್ತೀನಿ.

ಚಾರುದತ್ತ (ಜನಿವಾರ ಹಿಡಿದು ಜಗ್ಗುತ್ತ) ಛೆ, ಛೆ, ಕೂತುಕೊ. ಆ ಬಡಪಾಯಿ ಪಾರಿವಾಳ ಅದರ ಪ್ರೇಯಸಿ ಜೊತೆಗಿದೆ, ಸುಖವಾಗಿರಲಿ ಬಿಡು.

ಕುಂಭೀಲಕ ಎಲಾ ಇವನ, ಪಾರಿವಾಳ ನೋಡ್ತಾನೆಯೇ ಹೊರತು ನನ್ನ ಕಡೆ ತಿರುಗೋದೇ ಇಲ್ಲವಲ್ಲ. ಇರಲಿ ಮಾಡ್ತೀನಿ. (ಇನ್ನೊಂದು ಮಣ್ಣುಹೆಂಟೆಯನ್ನು ಸರಿಯಾಗಿ ಅವನ ಮೇಲೆ ಹಾಕುವನು)

ವಿದೂಷಕ (ಸುತ್ತ ನೋಡಿ ಕುಂಭೀಲಕನನ್ನು ಕಂಡು) ಓಹೋ ನೀನೋ ! (ಬಾಗಿಲು ತೆಗೆದು) ಬಾ ಕುಂಭೀಲಕ, ಬಾ, ಕೂತುಕೊ.

ಕುಂಭೀಲಕ ನಮಸ್ಕಾರ ಬ್ರಾಹ್ಮಣವರ್ಯ.

ವಿದೂಷಕ ಅಲ್ಲಯ್ಯ ಹೀಗೆ ಮೋಡ ಮುಚ್ಚಿದ ದಟ್ಟ ಕತ್ತಲೇಲಿ ಎಲ್ಲಿಂದ ಬಂದೆ ?

ಕುಂಭೀಲಕ ಆಕೆ.

ವಿದೂಷಕ ಯಾವ ಆಕೆ ?

ಕುಂಭೀಲಕ ಆ ಆ...ಆಕೆ.

ವಿದೂಷಕ ಒಳ್ಳೆ ಪೆದ್ದ ಸಿಕ್ಕಿದೆಯಲ್ಲಯ್ಯ ! ತಿಥಿ ಗ್ರಾಸಕ್ಕೆ ಬಾಯಿಬಿಡೋ ಕಾಗೆ ಹಾಗೆ ಒಂದೇ ಸಮನೆ ಕಾ ಕಾ ಕಾ ಅನ್ತಿದೀಯಲ್ಲ.

ಕುಂಭೀಲಕ (ಸ್ವಗತ) ಇರಲಿ ಇವನಿಗೆ ಹೀಗೆ ಹೇಳ್ತೀನೆ (ಪ್ರಕಾಶ) ನಾನು ನಿನಗೆ ಒಂದು ಪ್ರಶ್ನೆ ಕೊಡ್ತೇನೆ.

ವಿದೂಷಕ ನಾನು ನಿನ್ನ ತಲೇ ಮೇಲೆ ಕಾಲು ಇಡ್ತೇನೆ.

ಕುಂಭೀಲಕ ಇರಲಿ, ಮಾವಿನಮರ ಚಿಗುರೋ ಕಾಲ ಯಾವುದು, ಹೇಳು ?

ವಿದೂಷಕ ಅಯ್ಯೋ ತೊತ್ತಿನ ಮಗನೆ ! ಅಷ್ಟು ಗೊತ್ತಿಲ್ಲವ? ಗ್ರೀಷ್ಮ.

ಕುಂಭೀಲಕ ಆಹ ! ಎಂಥ ವಿದ್ವಾಂಸ ! ಎಷ್ಟು ಚೆನ್ನಾಗಿ ಹೇಳಿದೆ ! ಗ್ರೀಷ್ಮದಲ್ಲಿ ಮಾವು ಚಿಗುರುತ್ತೇನೋ ?

ವಿದೂಷಕ (ಸ್ವಗತ) ತಪ್ಪಾಗಿಹೋಯ್ತಲ್ಲ ಏನು ಹೇಳಲಿ ? (ಪ್ರಕಾಶ) ಸ್ವಲ್ಪ ತಾಳು, (ಚಾರುದತ್ತನ ಹತ್ತಿರ ಬಂದು) ಮಿತ್ರ, ಮಾವಿನ ಮರಗಳು ಚಿಗುರೋ ಕಾಲ ಯಾವುದು ?

ಚಾರುದತ್ತ (ನಗುತ್ತ) ಅಯ್ಯೋ ಮೂರ್ಖ ! ವಸಂತ.

ವಿದೂಷಕ (ಕುಂಭೀಲಕನ ಕಡೆ ತಿರುಗಿ) 'ಅಯ್ಯೋ ಮೂರ್ಖ! ವಸಂತ'

ಕುಂಭೀಲಕ ಇದನ್ನು ಹೇಳಿದೆಯೋ, ಸರಿ. ಎಲ್ಲಿ ಈ ಪ್ರಶ್ನೆಗೆ ಉತ್ತರ ಹೇಳು ನೋಡೋಣ ? ನಗರಗಳನ್ನು ರಕ್ಷಿಸೋದು ಯಾವುದು ?

ವಿದೂಷಕ ಓ, ಗೊತ್ತಾಯ್ತು. ಬೀದಿ.

ಕುಂಭೀಲಕ (ನಗುತ್ತ) ಅಲ್ಲೋ ಪೆದ್ದ, ಅದಲ್ಲ.

ವಿದೂಷಕ (ಸ್ವಗತ) ಎಲಾ ಇದರ ! ಮತ್ತೆ ಸಂಶಯ ಬಂತಲ್ಲ, ಇರಲಿ ಚಾರುದತ್ತನನ್ನೇ ಕೇಳ್ತೇನೆ. (ಚಾರುದತ್ತನ ಹತ್ತಿರಕ್ಕೆ ಬಂದು) ಮಿತ್ರ, ನಗರಗಳನ್ನು ರಕ್ಷಿಸೋದು ಯಾವುದು ?

ಚಾರುದತ್ತ ಸೇನೆ ಅಲ್ಲವೇನೋ ?

ವಿದೂಷಕ (ಕುಂಭೀಲಕನಿಗೆ) 'ಸೇನೆ ಅಲ್ಲವೇನೋ ?'

ಕುಂಭೀಲಕ ಎರಡನ್ನೂ ಕೂಡಿಸಿ ಬೇಗ ಹೇಳು.

ವಿದೂಷಕ ಸೇನೆ ವಸಂತ.

ಕುಂಭೀಲಕ ಹಾಗಲ್ಲವೋ, ತಲೆಕೆಳಗಾಗಿ ಹೇಳು.

| | |
|---|---|
| ವಿದೂಷಕ | (ತಲೆಕೆಳಗೆ ಮಾಡಿ ನಿಂತುಕೊಂಡು) ಸೇನೆವಸಂತ. |
| ಕುಂಭೀಲಕ | ಅಮ್ಮಯ್ಯ ! ಎಂಥ ಬೆಪ್ಪನೋ ! ಪದಗಳನ್ನು ತಿರುಗಿಸಿ ಹೇಳು. |
| ವಿದೂಷಕ | (ಕಾಲುಗಳನ್ನು ತಿರುಗಿಸಿಕೊಂಡು) ಸೇನೆವಸಂತ. |
| ಕುಂಭೀಲಕ | ಅಯ್ಯೋ ಮೂರ್ಖ ! ಪದ ಅಂದರೆ ಕಾಲು ಅಲ್ಲ. ಶಬ್ದಗಳನ್ನು ತಿರುಗಿಸಿ ಹೇಳು ಅಂದೆ. |
| ವಿದೂಷಕ | ವಸಂತಸೇನೆ. |
| ಕುಂಭೀಲಕ | ಬಂದಿರೋದು ಆಕೆಯೇ. |
| ವಿದೂಷಕ | ಓಹೋ ! ಸರಿ ಸರಿ ! ಚಾರುದತ್ತನಿಗೆ ತಿಳಿಸ್ತೇನೆ. (ಅವನ ಹತ್ತಿರ ಬಂದು) ನಿನ್ನ ಸಾಹುಕಾರ ಬಂದಿದಾನಪ್ಪ ಚಾರುದತ್ತ. |
| ಚಾರುದತ್ತ | ನಮಗೆ ಸಾಹುಕಾರ ಯಾರಯ್ಯ ? |
| ಕುಂಭೀಲಕ | ವಸಂತಸೇನೆ ಬಂದಿದಾಳೆ. |
| ಚಾರುದತ್ತ | ಯಾಕೆ ಸುಳ್ಳು ಹೇಳ್ತೀಯೆ ಮೈತ್ರೇಯ ? |
| ವಿದೂಷಕ | ಬೇಕಾದರೆ ಇವನನ್ನೇ ಕೇಳು. (ಕುಂಭೀಲಕನನ್ನು ಉದ್ದೇಶಿಸಿ) ಲೋ ಬೆಪ್ಪುತಕ್ಕಡಿ, ಇಲ್ಲಿ ಬಾರೋ (ಕುಂಭೀಲಕ ಚಾರುದತ್ತನ ಹತ್ತಿರ ಬರುತ್ತಾನೆ) |
| ಚಾರುದತ್ತ | ಈತ ಹೇಳೋದು ನಿಜವೆ ಕುಂಭೀಲಕ ? |
| ಕುಂಭೀಲಕ | ಹೌದು. ಇಗೋ ಬರ್ತಿದಾರೆ. |
| ಚಾರುದತ್ತ | ಪ್ರಿಯವಾರ್ತೆ ಎಂದೂ ನಿಷ್ಫಲವಾಗಬಾರದು. ಇದನ್ನು ತಗೊ (ತನ್ನ ಉತ್ತರೀಯವನ್ನೆ ತೆಗೆದು ಕೊಡುವನು) |
| ವಸಂತಸೇನೆ | (ಚೇಟಿಯ ಜೊತೆ ಒಳಗೆ ಬಂದು ಮೈತ್ರೇಯನಿಗೆ) ಅಯ್ಯಾ, ನಿಮ್ಮ ಜೂಜುಗಾರ ಎಲ್ಲಿ ? |
| ವಿದೂಷಕ | ಇಲ್ಲೇ ಶುಷ್ಕೋದ್ಯಾನವಲ್ಲಿ ಇದಾನೆ. |
| ವಸಂತಸೇನೆ | ಶುಷ್ಕೋದ್ಯಾನ ಯಾವುದು ? |
| ವಿದೂಷಕ | ಕುಡಿಯಲು ತಿನ್ನಲು ಎಲ್ಲಿ ಏನೂ ಇಲ್ಲವೋ ಅದೇ ಶುಷ್ಕೋದ್ಯಾನ, (ವಸಂತಸೇನೆ ನಗುವಳು) |
| ಚಾರುದತ್ತ | ಬಂದೆಯಾ ವಸಂತಸೇನೆ, ಬಾ ಕುಳಿತುಕೊ. |
| ವಿದೂಷಕ | ವಸಂತಸೇನೆ, ಇದು ಬೆಳುದಿಂಗಳ ದಿನವಲ್ಲ. ವಿಪರೀತ ಕತ್ತಲೆ, ಮಳೆ, ಅಂಥದರಲ್ಲಿ ಬಂದೆಯಲ್ಲ, ಅದೇನು ? |
| ಕುಂಭೀಲಕ | ಶುದ್ಧ ಬ್ರಾಹ್ಮಣ, ಏನೂ ತಿಳಿಯದವನು. |
| ವಸಂತಸೇನೆ | ಛೆ, ಛೆ, ಮಹಾಬುದ್ಧಿವಂತ ಅಂತ ಹೇಳು. |
| ಚೇಟಿ | ಆ ರತ್ನಹಾರದ ಬೆಲೆ ಎಷ್ಟು ಅಂತ ಕೇಳೋದಕ್ಕೆ ಬಂದದ್ದು. |

| | |
|---|---|
| ವಿದೂಷಕ | (ಜನಾಂತಿಕ) ಅಯ್ಯೋ, ನಾನು ಏನು ಹೇಳಿದ್ದೆ ! ಇನ್ನೇನೋ ಕೇಳೋದಕ್ಕೆ ಬಂದಿದಾಳೆ ಅಂತ ಮುಂಚೇನೆ ಹೇಳಿರಲಿಲ್ವೆ ? |
| ಚೇಟಿ | ನಮ್ಮ ಒಡತಿ ನೀವು ಕೊಟ್ಟ ರತ್ನಹಾರವನ್ನು ನಮ್ಮದೇ ಅಂತ ಭಾವಿಸಿ ಜೂಜಿನಲ್ಲಿ ಸೋತುಬಿಟ್ಟಳು, ಜೂಜುಗಾರ ಎಲ್ಲಿ ಹೋದನೋ ತಿಳೀಲಿಲ್ಲ. |
| ವಿದೂಷಕ | ಇದೇನು, ನಾನು ಹೇಳಿದ್ದ ಮಾತನ್ನೇ ತಿರುಗಿಸಿ ಹೇಳ್ತಿದೀಯೆ ? |
| ಚೇಟಿ | ಆ ರತ್ನಹಾರ ತರೋವರೆಗೂ ಈ ಒಡವೆ ನಿಮ್ಮಲ್ಲೇ ಇರಲಿ, (ಒಡವೆಯ ಗಂಟನ್ನು ತೋರಿಸುವಳು. ವಿದೂಷಕ ನೋಡಿ ಅವಾಕ್ಕಾಗಿ ನಿಲ್ಲುವನು) |
| ಚೇಟಿ | ಇದೇನು ಹೀಗೆ ನೋಡ್ತೀಯೆ ? ಇದನ್ನು ಹಿಂದೆ ಎಲ್ಲಾದರೂ ಕಂಡ ಹಾಗಿದೆಯೊ ? |
| ವಿದೂಷಕ | ಒಡವೆಗೆ ಮಾಡಿರೋ ಕೈಕೆಲಸ ತುಂಬಾ ಚೆನ್ನಾಗಿದೆ. ಅದಕ್ಕೆ ನೋಡಿದೆ ಅಷ್ಟೆ. |
| ಚೇಟಿ | ಅಥವಾ ನಾವು ನಿಮ್ಮಲ್ಲಿ ಇಟ್ಟಿದ್ದ ಒಡವೆ ಏನಾದರೂ ಇದೇ ಇರಬಹುದೆ ? ನೋಡು. |
| ವಿದೂಷಕ | (ಸಂತೋಷದಿಂದ) ಆಹಾ ! ನಮ್ಮ ಮನೆಯಿಂದ ಕಳ್ಳರು ಹಾರಿಸಿದ ಒಡವೆ ಇದೇ. |
| ಚಾರುದತ್ತ | ನಿಜವೊ ಅಥವಾ ತಮಾಷೆಯೊ ? |
| ವಿದೂಷಕ | ನನ್ನ ಬ್ರಾಹ್ಮಣ್ಯದ ಆಣೆಗೂ ನಿಜ ಮಿತ್ರ. |
| ಚಾರುದತ್ತ | ಹಾಗಿದ್ದರೆ ತುಂಬ ಸಂತೋಷ. |
| ವಿದೂಷಕ | (ಮರೆಯಲ್ಲಿ) ಅಯ್ಯೋ, ಇದು ಇವರಿಗೆ ಹೇಗೆ ಸಿಕ್ಕಿತು ಅಂತ ಕೇಳಲೆ ? |
| ಚಾರುದತ್ತ | ಕೇಳು, ಅದಕ್ಕೇನು ? |
| | (ವಿದೂಷಕ ಚೇಟಿಯ ಕಿವಿಯಲ್ಲಿ ಏನೋ ಹೇಳುವನು. ಪ್ರತಿಯಾಗಿ ಚೇಟಿ ವಿದೂಷಕನ ಕಿವಿಯಲ್ಲಿ ಏನೋ ಹೇಳುವಳು) |
| ಚಾರುದತ್ತ | ಇದೇನು ನಿಮ್ಮನಿಮ್ಮಲ್ಲೆ ಕಿವಿಮಾತು. ನಾನೇನು ಹೊರಗಿನವನೆ ? (ವಿದೂಷಕ ಚಾರುದತ್ತನ ಕಿವಿಯಲ್ಲಿ ಏನೋ ಹೇಳುವನು.) |
| ಚಾರುದತ್ತ | ಅಮ್ಮ, ಈ ಚಿನ್ನದ ಒಡವೆ ಅದೇ ಎನ್ನುವುದು ನಿಜವೆ ? |
| ಚೇಟಿ | ಹೌದು ಸ್ವಾಮಿ. |
| ಚಾರುದತ್ತ | ಪ್ರಿಯವಾರ್ತೆ ನುಡಿದಿದ್ದಕ್ಕೆ ಇಗೋ ಈ ಉಂಗುರ ಬಹುಮಾನವಾಗಿ ತಗೊ (ಹೀಗೆ ಹೇಳಿ ಬೆರಳಿಗೆ ಕೈಹಾಕಿ ಅಲ್ಲಿ ಉಂಗುರವಿಲ್ಲದ್ದನ್ನು ಕಂಡು ನಾಚಿಕೊಳ್ಳುವನು) |
| ವಸಂತಸೇನೆ | (ಸ್ವಗತ) ಇಂಥ ಔದಾರ್ಯ ಇದೆಯೆಂದೇ ನನಗೆ ನಿನ್ನಲ್ಲಿ ಅಷ್ಟು ಪ್ರೇಮ. |
| ಚಾರುದತ್ತ | (ಜನಾಂತಿಕ) ಅಬ್ಬ ! ಬಡತನ ನಿಜವಾಗಿ ಕಷ್ಟ. ಹಣವಿಲ್ಲದವನ ಬಾಳು ಒಣಗಿದ ಮರದ ಹಾಗೆ; ನೀರಿಲ್ಲದ ಕೆರೆ, ರೆಕ್ಕೆಯಿಲ್ಲದ ಹಕ್ಕಿಯ ಬಾಳೇ ಅವನಿಗೆ ಹೋಲಿಕೆ. |

ವಿದೂಷಕ (ಜನಾಂತಿಕ) ಮಿತ್ರ ಸಂಕಟಪಡಬೇಡ. (ಪ್ರಕಾಶ—ಹಾಸ್ಯಮಾಡುತ್ತ) ಅಮ್ಮ ಈ ಒಡವೆಗಳನ್ನು ಕಟ್ಟಿರೋ ವಸ್ತ್ರ ನಾನು ಸ್ನಾನ ಮಾಡೋವಾಗ ತೊಡುವ ವಸ್ತ್ರ. ಅದನ್ನು ಮೊದಲು ಇಲ್ಲಿ ಕೊಡು.

ವಸಂತಸೇನೆ (ಚಾರುದತ್ತನಿಗೆ) ಆರ್ಯ, ನನನ್ನು ಈ ರತ್ನಹಾರದಿಂದ ಅಳೆಯಲು ಹೊರಟದ್ದು ನ್ಯಾಯವೆ?

ಚಾರುದತ್ತ ನಿನ್ನ ಆಕ್ಷೇಪಣೆಯೇನೋ ಸರಿಯೆ. ಆದರೆ ಈಗ ನಮಗೆ ಬಂದಿರೋ ಬಡತನದಲ್ಲಿ ನಮ್ಮ ಒಡವೆ ಯಾರೋ ಕದ್ದುಕೊಂಡು ಹೋದರು ಎಂದರೆ ಲೋಕ ನಂಬೀತೆ? ಆದ್ದರಿಂದ ಹಾರ ಕಳಿಸಿದೆ ಅಷ್ಟೆ.

ವಿದೂಷಕ ಚೇಟಿ, ನೀನು ಇಲ್ಲಿಯೇ ಮಲಗುವವಳೋ ?

ಚೇಟಿ (ನಕ್ಕು) ಅಯ್ಯಾ ಮೈತ್ರೇಯ, ನೀನು ಶುದ್ಧ ಬಾಲಕನೇ ನಿಜ.

ವಿದೂಷಕ ಕುಳಿತುಕೊಳ್ಳಲೂ ಆಗದಂತೆ ಮಳೆ ಸುರಿಯಲು ಶುರುವಾಯಿತು.

ಚಾರುದತ್ತ ನಡೆಯಿರಿ, ಎಲ್ಲ ಒಳಕ್ಕೆ ಹೋಗೋಣ.

* * * *

## ಆರನೆಯ ಅಂಕ

### (ಸ್ಥಳ : ಚಾರುದತ್ತನ ಮಲಗುವ ಮನೆ)

ಚೇಟಿ ಏನಿದು, ಇಷ್ಟು ಹೊತ್ತಾದರೂ ಒಡತಿ ಮಲಗಿಯೇ ಇದಾಳಲ್ಲ! (ಮಲಗಿರುವ ವಸಂತಸೇನೆಯ ಹತ್ತಿರಕ್ಕೆ ಹೋಗಿ) ಆರ್ಯೆ, ಏಳು, ತುಂಬ ಹೊತ್ತಾಯ್ತು.

ವಸಂತಸೇನೆ (ಎಚ್ಚರವಾಗಿ) ಏನು, ಆಗಲೆ ಬೆಳಗಾಗಿ ಹೋಯಿತೆ ?

ಚೇಟಿ ನಮಗಂತೂ ಆಯಿತು. ನಿನಗೆ ಇನ್ನೂ ರಾತ್ರಿ ಅಂತ ಕಾಣುತ್ತೆ !

ವಸಂತಸೇನೆ ಚಾರುದತ್ತ ಎಲ್ಲಿ ?

ಚೇಟಿ ನಿನ್ನನ್ನು ಪುಷ್ಪಕರಂಡಕಜೀರ್ಣೋದ್ಯಾನಕ್ಕೆ ಕರಕೊಂಡು ಬರೋದಕ್ಕೆ ವರ್ಧಮಾನಕನಿಗೆ ಹೇಳಿ ಅಲ್ಲಿಗೆ ಹೋದರು. (ರದನಿಕೆ ರೋಹಸೇನನ ಜೊತೆ ಬರುವಳು)

ರದನಿಕೆ ಬಾ ರೋಹಸೇನ, ಬಂಡಿ ಆಟ ಆಡೋಣ.

ರೋಹಸೇನ (ಅಳುತ್ತ) ಉಹ್ಞೂ, ನನಗೆ ಈ ಮಣ್ಣಿನ ಬಂಡಿ ಬೇಡ. ಚಿನ್ನದ ಬಂಡೀನೇ ಬೇಕು.

| | |
|---|---|
| ರದನಿಕೆ | ಹಾಗೆ ಹಟ ಮಾಡಬಾರದು ಮಗು, ಚಿನ್ನ ನಮಗೆಲ್ಲಿ ಬಂದೀತು ? ನಿಮ್ಮ ತಂದೆಗೆ ಮತ್ತೆ ಒಳ್ಳೆಯ ದಿನ ಬರುತ್ತೆ. ಆಗ ಚಿನ್ನದ ಬಂಡೀಲೇ ಆಡುವಿಯಂತೆ. ಅಗೋ, ಅಲ್ಲಿ ವಸಂತಸೇನೆ ಇದಾಳೆ. ಹೋಗೋಣ ಬಾ. (ವಸಂತಸೇನೆಯ ಹತ್ತಿರ ಬಂದು) ನಮಸ್ಕಾರ ಅಮ್ಮ. |
| ವಸಂತಸೇನೆ | ಬಾ ರದನಿಕೆ, ಈ ಹುಡುಗ ಯಾರು? ಅಲಂಕಾರವಿಲ್ಲದೆಯೇ ಎಷ್ಟು ಮುದ್ದಾಗಿದಾನೆ ? |
| ರದನಿಕೆ | ಇವನೇ ರೋಹಸೇನ, ಆರ್ಯ ಚಾರುದತ್ತನ ಮಗ. |
| ವಸಂತಸೇನೆ | (ಕೈನೀಡಿ) ಹತ್ತಿರ ಬಾ ಮಗೂ. (ಸೆಳೆದು ತೊಡೆಯ ಮೇಲೆ ಕೂರಿಸಿಕೊಂಡು) ರೂಪ ಪೂರ್ತಿ ತಂದೆಯದೇ ! |
| ರದನಿಕೆ | ರೂಪ ಮಾತ್ರ ಅಲ್ಲ, ಸ್ವಭಾವ ಸಹ. ಸದ್ಯದ ಸ್ಥಿತೀಲಿ ಚಾರುದತ್ತ ಈ ಮಗು ಮುಖ ನೋಡಿ ತನ್ನ ದುಃಖ ಮರೀತಿದಾನೆ. |
| ವಸಂತಸೇನೆ | ಇವನು ಅಳ್ತಾ ಇರೋದು ಯಾಕೆ ? |
| ರದನಿಕೆ | ಪಕ್ಕದ ಮನೆ ಹುಡುಗನ ಚಿನ್ನದ ಬಂಡಿ ಇಟ್ಟುಕೊಂಡು ಆಟ ಆಡ್ತಿದ್ದ. ಆ ಹುಡುಗ ತನ್ನ ಬಂಡಿ ತಗೊಂಡು ಹೋಗಿಬಿಟ್ಟ. ಬಂಡಿ ಬೇಕು ಅಂತ ಹಟ ಮಾಡಿದ್ದಕ್ಕೆ ನಾನೇ ಈ ಮಣ್ಣಿನ ಬಂಡಿ ಮಾಡಿಕೊಟ್ಟೆ. ಮಣ್ಣಿನ ಬಂಡಿ ಬೇಡ, ಚಿನ್ನದ್ದೇ ಬೇಕು ಅಂತ ಅಳ್ತಿದಾನೆ. |
| ವಸಂತಸೇನೆ | ಅಯ್ಯೋ ವಿಧಿಯೆ ! ಇಂಥ ಮಗು ಸಹ ಕಂಡವರ ಮನೆಯ ವಸ್ತುವಿಗೆ ಆಸೆ ಪಡಬೇಕಾದ ಪ್ರಸಂಗ ಬಂತೆ ? ಭಾಗ್ಯ ಮನುಷ್ಯರ ಅದೃಷ್ಟದ ಜೊತೆಯಲ್ಲೇ ಆಟವಾಡುತ್ತೆ ಅಲ್ಲವೆ ? (ಕಣ್ಣಲ್ಲಿ ನೀರು ತುಂಬಿ) ಅಳಬೇಡ ರೋಹಸೇನ. ಚಿನ್ನದ ಬಂಡಿ ತಗೊಂಡೇ ಆಟ ಆಡುವಿಯಂತೆ. |
| ಹುಡುಗ | ರದನಿಕೆ, ಇವಳು ಯಾರು ? |
| ವಸಂತಸೇನೆ | ನಿಮ್ಮ ತಂದೆಯ ಗುಣಕ್ಕೆ ಸೋತ ದಾಸಿ ಮಗೂ. |
| ರದನಿಕೆ | ಇವಳೂ ನಿನ್ನ ತಾಯಿ ಮಗೂ. |
| ಹುಡುಗ | ಏನಿಲ್ಲ ಎಲ್ಲ ಸುಳ್ಳು. ಅಮ್ಮ ಆದ್ರೆ ಇವಳ ಹತ್ತಿರ ಒಡವೆ ಎಲ್ಲಿ ಇರ್ತಿತ್ತು ? |
| ವಸಂತಸೇನೆ | ಈ ಮಗು ಅರಿಯದೆ ಆಡೋ ಮಾತು ಎಷ್ಟು ಮನ ಕರಗಿಸೋ ಹಾಗಿದೆ ! (ತನ್ನ ಒಡವೆಗಳನ್ನು ಕಳಚಿಟ್ಟು, ಅಳುತ್ತ) ಇಗೋ, ಈಗ ನಾನು ನಿಜವಾಗಿ ನಿನ್ನ ತಾಯಿ ಆದೆ. ಎಲ್ಲಿ ? ಈ ಒಡವೆಯೆಲ್ಲ ತಗೊ, ಇದರಿಂದ ಚಿನ್ನದ ಬಂಡಿ ಮಾಡಿಸಿಕೊ. |
| ಹುಡುಗ | ಉಹ್ಞು, ನಾನು ತಗೊಳ್ಳಲ್ಲ. ನೀನು ಅಳ್ತಾ ಇದೀಯೆ. |

| | |
|---|---|
| ವಸಂತಸೇನೆ | (ಕಣ್ಣೀರು ಒರೆಸಿಕೊಂಡು) ಇಲ್ಲ ಪುಟ್ಟ. ನಾನು ಅಳ್ತಿಲ್ಲ. ಹೋಗು. ಬಂಡಿ ಮಾಡಿಸಿಕೊಂಡು ಆಟ ಆಡು. (ಒಡವೆಯನ್ನು ಮಣ್ಣಿನ ಬಂಡಿಯಲ್ಲಿ ಇಡುವಳು) |
| | (ರದನಿಕೆ ಹುಡುಗನನ್ನು ಒಳಕ್ಕೆ ಕಳಿಸುವಳು. ವಸಂತಸೇನೆ ಇನ್ನೊಂದು ಕೊಠಡಿಗೆ ಹೋಗುವಳು. ವರ್ಧಮಾನಕ ಬರುವನು) |
| ವರ್ಧಮಾನಕ | ರದನಿಕೆ, ರಥ ಹೊರಡೋದಕ್ಕೆ ಸಿದ್ಧವಾಗಿದೆ ಅಂತ ವಸಂತಸೇನೆಗೆ ತಿಳಿಸು. |
| ರದನಿಕೆ | (ಕೊಠಡಿಯ ಹೊರಗೆ ನಿಂತು ವಸಂತಸೇನೆಗೆ) ಅಮ್ಮ ರಥ ಸಿದ್ಧವಾಗಿದೆಯಂತೆ. |
| ವಸಂತಸೇನೆ | ಒಂದು ಕ್ಷಣ ತಾಳು ರದನಿಕೆ, ಬಂದುಬಿಡ್ತೇನೆ. |
| ರದನಿಕೆ | (ವರ್ಧಮಾನಕನ ಹತ್ತಿರ ಬಂದು) ಅಮ್ಮ ಅಲಂಕರಿಸಿಕೋತಾ ಇದಾರೆ. ಇನ್ನೇನು ಬಂದುಬಿಡ್ತಾರೆ. |
| ವರ್ಧಮಾನಕ | ಓಹೋ! ನಾನು ರಥದ ಹಾಸಿಗೆಯನ್ನೇ ಮರೆತುಬಂದೆ. ರಥ ತಗೊಂಡು ಹೋಗಿ ಬೇಗ ಬಂದುಬಿಡ್ತೇನೆ. (ಹೋಗುವನು) |
| | (ಪ್ರವೇಶ—ರಥವಲ್ಲಿ ಸ್ಥಾವರಕನೆಂಬ ಶಕಾರನ ಚೇಟ) |
| ಸ್ಥಾವರಕ | ರಥ ತೆಗೆದುಕೊಂಡು ಪುಷ್ಪಕರಂಡಕಜೀರ್ಣೋದ್ಯಾನಕ್ಕೆ ಬಾ ಅಂತ ಒಡೆಯ ಶಕಾರ ಅಪ್ಪಣೆ ಮಾಡಿದ್ದಾರೆ. ಬೇಗ ಹೋಗಬೇಕು. ಹೋಗೋದಕ್ಕೆ ಜಾಗ ಇಲ್ಲದ ಹಾಗೆ ದಾರಿ ತುಂಬ ರಥಗಳೇ. ಇವರ ಜೊತೆಗೆ ಇದ್ದಾರೋ ರಥಿಕನ ಕಾಟ ಬೇರೆ. ಅವನ ಗಾಡಿ ತಳ್ಳೋದಕ್ಕೆ ನಾನು ರಥ ನಿಲ್ಲಿಸಿ ಇಳಿದು ಬರಬೇಕು! ಇಳಿದದ್ದು ಆಯ್ತಲ್ಲ. ಇನ್ಯಾಕೆ ಮಾತು? ಆವರೆ ಚಾರುದತ್ತನ ಮನೆ ಮುಂದೆ ನನ್ನ ರಥ ನಿಲ್ಲಿಸಿಬಿಟ್ಟೆ ಅಂತ ಕಾಣುತ್ತೆ. ಇರಲಿ ಈ ರಥ ದಬ್ಬಿಬಿಟ್ಟವನೇ ಮತ್ತೆ ನನ್ನ ರಥ ತೆಗೆದುಕೊಂಡು ಹೋಗ್ತೀನಲ್ಲ. (ಹೋಗುವನು) |
| | (ರದನಿಕೆ ಮತ್ತು ವಸಂತಸೇನೆಯರ ಪ್ರವೇಶ) |
| ರದನಿಕೆ | ಅಮ್ಮ ರಥಚಕ್ರದ ಸದ್ದು ನಿಂತ ಹಾಗಾಯ್ತು. ವರ್ಧಮಾನಕ ಮತ್ತೆ ರಥ ತಂದಿರಬೇಕು. |
| ವಸಂತಸೇನೆ | ಇಗೋ, ಹೊರಟೆ ರದನಿಕೆ. (ಹೋಗುತ್ತಿದ್ದವಳು ನಿಂತು) ಯಾಕೆ ಬಲಗಣ್ಣು ಇಷ್ಟು ಹಾರ್ತಿದೆ? ಏನೀಗ? ಚಾರುದತ್ತನನ್ನು ನೋಡಿದರೇ ಸಾಕು. ಎಲ್ಲ ಅಶುಭ ಹಾರಿಹೋಗುತ್ತೆ. ನಾನು ಇನ್ನು ರಥ ಹತ್ತುತ್ತೇನೆ ರದನಿಕೆ. |
| ರದನಿಕೆ | ಆಗಲಿ ಅಮ್ಮ. |

(ಇಬ್ಬರೂ ಹೋಗುವರು. ಒಂದು ಕ್ಷಣದ ನಂತರ ತೆರೆಯ ಹಿಂದೆ ದನಿ ಕೇಳುವುದು)

ಅಯ್ಯಾ ಬಾಗಿಲು ಕಾಯುವವರೆ, ನಿಮ್ಮ ನಿಮ್ಮ ಕೆಲಸಗಳಲ್ಲಿ ಬಹಳ ಎಚ್ಚರವಾಗಿರಿ. ಸೆರೆಯಲ್ಲಿದ್ದ ಆರ್ಯಕ ಅಲ್ಲಿದ್ದ ಕಾವಲುಗಾರರನ್ನು ಕೊಂದು ಸಂಕಲೆ ಕಿತ್ತುಕೊಂಡು ತಪ್ಪಿಸಿಕೊಂಡಿದ್ದಾನೆ. ಅವನು ಎಲ್ಲೋ ಅಡಗಿರಬೇಕು. ಹುಡುಕಿ ಹಿಡಿಯಿರಿ.

(ಆರ್ಯಕನ ಪ್ರವೇಶ. ಗಾಬರಿಯಲ್ಲಿದ್ದಾನೆ. ಒಂದು ಕಾಲಿನಲ್ಲಿ ಸರಪಳಿಯಿದೆ. ಮುಖಕ್ಕೆ ಮುಸುಕು ಹಾಕಿಕೊಂಡಿದ್ದಾನೆ. ಮುಸುಕು ಸ್ವಲ್ಪ ಸರಿಸಿ ನೋಡುತ್ತ ಬರುತ್ತಿದ್ದಾನೆ.)

ಆರ್ಯಕ ಯಾವನೋ ಸಿದ್ಧ ಆರ್ಯಕ ರಾಜನಾಗ್ತಾನೆ ಅಂತ ಭವಿಷ್ಯ ಹೇಳಿದರೆ ಅದರಲ್ಲಿ ನನ್ನ ತಪ್ಪೇನಿದೆ ? ಸಿದ್ಧನ ಮಾತಿಗೆ ಹೆದರಿ ಪಾಲಕ ಮಹಾರಾಜ ನನ್ನನ್ನು ಹಿಡಿತರಿಸಿ ಸೆರೆಯಲ್ಲಿಡಬಹುದೆ ? ಸದ್ಯ, ಮಿತ್ರನಾದ ಶರ್ವಿಲಕ ಏನೆಲ್ಲ ಸಾಹಸಮಾಡಿ ನನ್ನನ್ನು ಬಿಡಿಸಿದ. ಈಗ ನಾನು ಎಲ್ಲಿ ಹೋಗಿ ತಲೆಮರೆಸಿಕೊಳ್ಳಲಿ ? (ಸ್ವಲ್ಪ ಮುಂದೆ ಹೋಗಿ) ಇದು ಯಾರೋ ಸಾಹುಕಾರನ ಮನೆಯಿರಬೇಕು. ಗೋಡೆಗಳೆಲ್ಲ ಅಲ್ಲಲ್ಲಿ ಬಿದ್ದುಹೋಗಿದೆ. ಈ ಮನೆಯವನೂ ನನ್ನಂತೆಯೇ ಕಷ್ಟದಲ್ಲಿರೋ ವ್ಯಕ್ತಿ ಇದ್ದರೂ ಇರಬಹುದು. ಇಲ್ಲೇ ಅಡಗಿಕೊಳ್ತೇನೆ. (ಬಂಡಿಯ ಸದ್ದನ್ನು ಆಲಿಸಿ) ಓಹೋ ! ಈ ಕಡೆಗೆ ಯಾವುದೋ ರಥ ಬರ್ತಿದೆ. ಇದು ಎಲ್ಲಿಗೆ ಹೋಗುವ ರಥವೊ ? ಯಾವ ದೊಡ್ಡ ಮನುಷ್ಯನದೊ ? ಯಾವುದಾದರೇನು ? ದೈವವೇ ಇದನ್ನು ನನ್ನ ಸಮಯಕ್ಕೆ ಕಳಿಸಿತು ಅನ್ನಿಸ್ತಿದೆ.

ವರ್ಧಮಾನಕ (ತೆರೆಯಲ್ಲಿ ರಥವನ್ನು ಹೊಡೆದುಕೊಂಡು ಬಂದು) ರದನಿಕೆ, ರಥ ಬಂದಿದೇ ವಸಂತಸೇನೆಗೆ ಬರೋದಕ್ಕೆ ಹೇಳು.

ಆರ್ಯಕ ಓಹೋ, ಈಗ ತಿಳೀತು. ಇದು ವೇಶ್ಯೆಯ ಬಂಡಿ. ಇರಲಿ, ಇದರೊಳಗೆ ಸೇರಿಕೊಂಡುಬಿಡ್ತೇನೆ. (ಹತ್ತುವುದಕ್ಕೆಂಬಂತೆ ಮುಂದೆ ಹೋಗುವನು ಕಾಲಿನ ಸರಪಳಿಯ ಸದ್ದಾಗುವುದು)

ವರ್ಧಮಾನಕ (ತೆರೆಯಲ್ಲಿ) ಇದೇನು ? ಕಾಲಕಡಗದ ಸದ್ದಾಗ್ತಿದೆ । ವಸಂತಸೇನೆ ಬಂದಳು ಅಂತ ಕಾಣುತ್ತೆ. ಅಮ್ಮ, ವಸಂತಸೇನೆ ! ಹಿಂದಿನಿಂದಲೇ ರಥ ಹತ್ತು. ಮುಂದೆ ಬಂದರೆ ಕಡಗದ ದನಿಗೆ ಎತ್ತು ಬೆದರಬಹುದು.

ಆರ್ಯಕ (ರಥವನ್ನು ಹತ್ತಲೆಂಬಂತೆ ತೆರೆಯ ಬದಿಗೆ ಹೋಗಿ ಮರೆಯಾಗುವನು.)

**ವರ್ಧಮಾನಕ** (ತೆರೆಯಲ್ಲಿ) ಕಡಗದ ಶಬ್ದವಾಗ್ತಿದೆ. ರಥ ಭಾರವಾಯಿತು. ಬಹುಶಃ ವಸಂತಸೇನೆ ಬಂಡಿಯೊಳಗೆ ಕೂತಿರಬೇಕು. ಇನ್ನು ಹೊರಡ್ತೇನೆ. (ಗಾಡಿ ತೆರಳಿದ ಶಬ್ದವಾಗುವುದು)

**ವೀರಕ** (ಬಂದು) ಮಾನಕ ಭದ್ರಕರೆ ಇಲ್ಲಿ ಕೇಳಿ. ಸೆರೆಯಲ್ಲಿದ್ದ ಆರ್ಯಕ ತಪ್ಪಿಸಿ ಕೊಂಡಿದಾನೆ ಪಾಲಕ ಮಹಾರಾಜರಿಗೆ ಇದರಿಂದ ತುಂಬ ಕಳವಳವಾಗಿದೆ. ನೀವು ಮೈಯೆಲ್ಲ ಕಣ್ಣಾಗಿದ್ದು ಆರ್ಯಕನನ್ನು ಹುಡುಕಿ ಹಿಡೀರಿ.

**ಚಂದನಕ** (ಬಂದು) ಎಲೋ ವೀರಕ, ಅಲ್ಲಿ ಒಂದು ಬಂಡಿ ಹೋಗ್ತಿದೆ, ನೋಡು. ಅದು ಯಾರದು ? ಎಲ್ಲಿಂದ ಬಂತು ? ವಿಚಾರಿಸೋಣ ಬಾ.

**ವೀರಕ** ಎಲೋ ಬಂಡಿಯವನೆ, ನಿಲ್ಲಿಸು. ಈ ಬಂಡಿ ಯಾರದ್ದು ? ಇದರಲ್ಲಿ ಯಾರಿದಾರೆ ?

**ವರ್ಧಮಾನಕ** ಇದು ಚಾರುದತ್ತನ ರಥ, ಒಳಗೆ ವಸಂತಸೇನೆ ಇದಾಳೆ, ಇದನ್ನು ಚಾರುದತ್ತನ ಹತ್ತಿರಕ್ಕೆ ತೆಗೆದುಕೊಂಡು ಹೋಗ್ತಿದೇನೆ.

**ಚಂದನಕ** ಸರಿ, ನೀನು ಹೋಗಬಹುದು.

**ವೀರಕ** ನಾವು ನೋಡದೆಯೆ ?

**ಚಂದನಕ** ಹೌದು.

**ವೀರಕ** ಯಾವ ವಿಶ್ವಾಸದ ಮೇಲೆ ?

**ಚಂದನಕ** ಚಾರುದತ್ತನ ವಿಶ್ವಾಸದ ಮೇಲೆ.

**ವೀರಕ** ಚಾರುದತ್ತ ಯಾರು ? ವಸಂತಸೇನೆ ಯಾರು ? ರಥವನ್ನು ನೋಡದೆ ಕಳಿಸೋದು ಅಂದರೆ ಏನು ?

**ಚಂದನಕ** ಏನು ? ಆರ್ಯ ಚಾರುದತ್ತ ವಸಂತಸೇನೆ ಗೊತ್ತಿಲ್ಲವೆ ? ಬೆಳದಿಂಗಳ ಜೊತೆಗಿರೋ ಚಂದ್ರನನ್ನು ಕಾಣೆ ಅಂತ ಹೇಳಿದ ಹಾಗಾಯ್ತು !

**ವೀರಕ** ಲೋ ಚಂದನಕ ನನಗೆ ಚಾರುದತ್ತ ವಸಂತಸೇನೆ ಎಲ್ಲ ಗೊತ್ತು. ಆದರೆ ರಾಜಕಾರ್ಯ ಬಂದಾಗ ಮಾತ್ರ ತಂದೆ ಯಾರು ಅಂತಲೂ ತಿಳೀದು.

**ಚಂದನಕ** ಸರಿ ಹಾಗಾದರೆ, ನೀನೇ ರಥ ಹತ್ತಿ ನೋಡು.

**ವೀರಕ** ಉಂಟೆ ? ನಿನ್ನ ಮಾತಲ್ಲೇ ದೊರೆಗೆ ಹೆಚ್ಚು ನಂಬಿಕೆ, ಅಲ್ಲದೆ ನೀನು ನೋಡಿದರೆ ನಾನು ನೋಡಿದ ಹಾಗೆಯೇ. ನೀನೇ ಹತ್ತಿ ನೋಡು.

**ಚಂದನಕ** (ರಥವನ್ನು ಹತ್ತುವನು)

**ಆರ್ಯಕ** (ಮರೆಯಲ್ಲಿ) ಆರ್ಯ, ನಿನಗೆ ಶರಣಾಗಿದೇನೆ.

**ಚಂದನಕ** ಶರಣಾಗತನಿಗೆ ಅಭಯ ಕೊಟ್ಟಿದೇನೆ. ನೀನು ಯಾರು ? (ಎರಡು ಕ್ಷಣ ಬಿಟ್ಟು) ಓಹೋ ಆರ್ಯಕನೇ ಇವನು ! (ಸ್ವಗತ) ಗಿಡಗನಿಂದ ತಪ್ಪಿಸಿ ಕೊಂಡ ಹಕ್ಕಿಯ ಹಾಗೆ ನಮ್ಮ ಕೈಗೆ ಬಿದ್ದನಲ್ಲ ! ಇವನು ನಿರಪರಾಧಿ,

ಅಲ್ಲದೆ ಶರಣಾಗತ, ಚಾರುದತ್ತನ ರಥದಲ್ಲಿ ಬೇರೆ ಆಶ್ರಯ ಪಡೆದಿದಾನೆ. ಹಿಂದೆ ನನ್ನ ಪ್ರಾಣ ರಕ್ಷಿಸಿದ ಶರ್ವಿಲಕನ ಸ್ನೇಹಿತ ಬೇರೆ. ಹಾಗಂತ ಇವನನ್ನು ಬಿಡೋ ಹಾಗೂ ಇಲ್ಲ. ಹಿಡಿಯಬೇಕು ಅಂತ ರಾಜಾಜ್ಞೆಯಿದೆ. ಈಗ ಏನು ಮಾಡೋದು ? (ಯೋಚಿಸಿ) ಏನಾಗುತ್ತೋ ಆಗಿಕೊಳ್ಳಲಿ. ಇವನಿಗೆ ಅಭಯ ಕೊಟ್ಟಿದ್ದಾಗಿದೆ. ಬಿಟ್ಟುಬಿಡ್ತೇನೆ (ಕೆಳಗೆ ಇಳಿದು ಬಂದು) ವೀರಕ ಆರ್ಯಕನನ್ನು—ಅಲ್ಲ—ಆರ್ಯೆಯನ್ನು ನೋಡಿದೆ. ಅವಳು ಹೇಳಿದಳು "ನಾನು ಚಾರುದತ್ತನ ಬಳಿ ಹೋಗ್ತಿರೋವಾಗ ಹೀಗೆ ದಾರೀಲಿ ತೊಂದರೆ ಮಾಡೋದು ಸರಿಯೆ ?" ಅಂತ.

ವೀರಕ ನಿನ್ನ ಮಾತಲ್ಲಿ ನನಗೆ ಸಂದೇಹ ಬರ್ತಿದೆ.

ಚಂದನಕ ಯಾಕೆ ?

ವೀರಕ ನಿನ್ನ ಕಂಠ ಬಿಗಿದಿದೆ. ದನಿ ಬದಲಾಗಿದೆ. ಮೊದಲು ಆರ್ಯಕ ಅಂತ ಹೇಳಿ ಆಮೇಲೆ ಆರ್ಯೆ ಅಂತ ಹೇಳಿದೆ. ನಾನೇ ನೋಡ್ತೇನೆ.

ಚಂದನಕ (ಸ್ವಗತ) ಆರ್ಯಕ ಚಾರುದತ್ತನ ರಥದಲ್ಲಿ ತಪ್ಪಿಸಿಕೊಂಡು ಹೋಗ್ತಿದ್ದ ಅಂತ ರಾಜನಿಗೆ ತಿಳಿದರೆ ಖಂಡಿತ ಚಾರುದತ್ತನಿಗೆ ಶಿಕ್ಷೆಯಾಗುತ್ತೆ. ಈಗ ಏನು ಮಾಡಲಿ ? (ಪ್ರಕಾಶ) ಎಲೋ ನಾನು ನೋಡಿದ ಮೇಲೂ ನೋಡೋದಕ್ಕೆ ನೀನು ಯಾರೋ ?

ವೀರಕ ನನ್ನನ್ನು ತಡೆಯೋದಕ್ಕೆ ನೀನು ಯಾರೋ ?

ಚಂದನಕ (ಕೋಪದಿಂದ) ಯಾರು ಅಂತ ಹೇಳಬೇಕಾ ? ನಿನ್ನ ಜಾತಿ ಯಾವುದು ಅನ್ನೋದನ್ನೂ ಮರೆತು ದೊಡ್ಡ ಮನುಷ್ಯನ ಹಾಗೆ ಮಾತಾಡ್ತಿದೀಯಲ್ಲೋ!

ವೀರಕ ಏನೋ ಅದು, ಜಾತಿ ಗೀತಿ ಅಂತೀಯ ? ಯಾವುದೋ ನನ್ನ ಜಾತಿ ?

ಚಂದನಕ ಹೇಳಲಾ ?

ವೀರಕ ಹೇಳೋ, ಹೆದರಿಕೇನಾ ?

ಚಂದನಕ ಬೇಡ, ಚೆನ್ನಾಗಿರಲ್ಲ, ಆದರೆ ಹೇಳಿದೆ ಅಂದರೆ ಮಾತ್ರ ಮುಗೀತು. ಬೇಲದಕಾಯಿ ಒಡೆದ ಮೇಲೆ ಹೋಯ್ತು ಗೊತ್ತ ?

ವೀರಕ ಏನು ಹೆದರಿಸ್ತಿಯೇನೋ ? ಹೇಳೋ ನೋಡೋಣ ?

ಚಂದನಕ (ಕ್ಷೌರದ ಕತ್ತಿಯನ್ನು ಮಸೆಯುವಂತೆ ಬಲಗೈ ಬೆರಳನ್ನು ಎಡಗೈ ಮೇಲೆ ಆಡಿಸಿ ತೋರಿಸುತ್ತ) ಇದೇ ತಾನೆ? ಇಂಥ ಮನುಷ್ಯ ಈಗ ಸೇನಾಪತಿ ಆಗಿಬಿಟ್ಟಿದೀಯ !

ವೀರಕ ಲೋ ಮೂರ್ಖ, ನಿನ್ನ ಜಾತಿ ತಾನೆ ಏನು ಮಹಾಶ್ರೇಷ್ಠವೋ ?

ಚಂದನಕ ನಮ್ಮದೆ ? ಚಂದ್ರನಷ್ಟು ಪರಿಶುದ್ಧವಾದ್ದು.

ವೀರಕ ಗೊತ್ತಿದೆಯೋ, ಗೊತ್ತಿದೆ ! ಪರಿಶುದ್ಧವಾದ್ದಂತೆ ! ಹೇಳಲಾ ?

ಚಂದನಕ ಹೇಳೋ, ಏನು ಹೆದರಿಕೇನಾ ?

ವೀರಕ (ಚಪ್ಪಲಿ ಹೊಲಿಯುವುವನನ್ನು ಸನ್ನೆಯಿಂದ ತೋರಿಸಿ) ಇದು ತಾನೆ ? ಬಹಳ ಪರಿಶುದ್ಧವಾದ ಜಾತಿ ಕಣಯ್ಯ !

ಚಂದನಕ (ಕೋಪದಿಂದ) ಏಯ್ ! ನನ್ನನ್ನು, ಚಂದನಕನನ್ನು, ಚಮ್ಮಾರ ಜಾತಿಯೇನೋ? ಅಯೋಗ್ಯ, ಗಾಡಿ ಹತ್ತು ತೋರಿಸ್ತೇನೆ. (ರಥ ಹತ್ತಲು ಹೋಗುವನು. ಚಂದನಕ ಅವನ ಜುಟ್ಟು ಹಿಡಿದು ಎಳೆದು ಕೆಳಗೆ ಕೆಡವಿ) ನಾನು ನೋಡಿದ್ದನ್ನು ನೋಡೋಕೆ ನೀನು ಯಾರೋ ?

ವೀರಕ (ಕೋಪದಿಂದ ಎದ್ದು) ಲೋ ಅಯೋಗ್ಯ. ರಾಜಾಜ್ಞೆ ಪ್ರಕಾರ ಕೆಲಸ ಮಾಡ್ತಿರೋವಾಗ ಜುಟ್ಟು ಹಿಡಿದು ಎಳೆದು, ಕೆಡವಿ, ಒದ್ದಿದೀಯ. ನಿನ್ನನ್ನು ನ್ಯಾಯಾಸ್ಥಾನಕ್ಕೆ ಕರೆಸಿ ಕೈಕಾಲು ಕಡಿಸದೆ ಇದ್ರೆ ನಾನು ವೀರಕನೇ ಅಲ್ಲ.

ಚಂದನಕ ಹೋಗೋ, ಹೋಗೋ ! ನ್ಯಾಯಾಸ್ಥಾನಕ್ಕಾದರೂ ಹೋಗು, ರಾಜಾಸ್ಥಾನಕ್ಕೆ ಬೇಕಾದರೂ ಹೋಗು, ನಿನ್ನಂಥ ನಾಯಿ ಕೈಲಿ ಏನಾದೀತು ?

ವೀರಕ ನೋಡ್ತಿರು ಏನಾದೀತು ಅಂತ. (ಹೋಗುವನು)

ಚಂದನಕ (ಸುತ್ತ ನೋಡಿ) ಲೋ ಬಂಡಿಯವನೆ, ಜಾಗ್ರತೆ ಗಾಡಿಬಿಡು. ಅಮ್ಮ ವಸಂತಸೇನೆ, ಯಾರಾದರೂ ದಾರೀಲಿ ಗಾಡಿ ತಡೆದರೆ ಚಂದನಕ ವೀರಕ ಇಬ್ಬರೂ ಪರೀಕ್ಷಿಸಿದಾರೆ ಅಂತ ಹೇಳಿ, ಗುರುತಿಗೆ ಈ ಕತ್ತಿ ತೋರಿಸು. (ತನ್ನ ಕತ್ತಿಯನ್ನು ಕೊಡುವನು)

ಆರ್ಯಕ (ತೆಗೆದುಕೊಂಡು ಸಂತೋಷದಿಂದ) ಭಲೆ ! ದೈವದ ಸಹಾಯ ಎಂವರೆ ಇದೇ. ಕತ್ತಿ ಸಿಕ್ಕಿತು ! ಇನ್ನು ಬದುಕಿದೆ.

ಚಂದನಕ ವಸಂತಸೇನೆ, ನನ್ನನ್ನು ಮಾತ್ರ ಮರೀಬೇಡ. ನಿನ್ನ ಸ್ನೇಹ ನನ್ನಲ್ಲಿ ಸದಾ ಇರಲಿ. (ಗಾಡಿ ಹೋಗುವ ಶಬ್ದವಾಗುವುದು. ಚಂದನಕ ಮುಂದೆ ನೋಡಿ) ಓಹೋ ಶರ್ವಿಳಕನೇ ಹೋಗ್ತಿದಾನೆ. ನಾನು ದೊರೆಗೆ ವಿರೋಧ ಮಾಡಿಕೊಂಡೆ. ಆದ್ದರಿಂದ ಇವನ ಜೊತೆಗೇ ಹೋಗಿಬಿಡೋದು ಯೋಗ್ಯ. ಅಯ್ಯಾ ಶರ್ವಿಳಕ ! (ಕೈ ತಟ್ಟಿ ಕೂಗುತ್ತ ಹೋಗುವನು)

* * *

## ಏಳನೆಯ ಅಂಕ

### (ಸ್ಥಳ : ಉದ್ಯಾನ)

ಚಾರುದತ್ತ (ವಿದೂಷಕನನ್ನು ಕುರಿತು) ಮೈತ್ರೇಯ, ವರ್ಧಮಾನಕ ಯಾಕೆ ಇನ್ನೂ ಬರಲಿಲ್ಲ ?

ವಿದೂಷಕ ವಸಂತಸೇನೆಯನ್ನು ಬೇಗ ಕರಕೊಂಡು ಬಾ ಅಂತ ಹೇಳಿದ್ದೆ. ಯಾಕೆ ಬರಲಿಲ್ಲವೊ ?

ಚಾರುದತ್ತ ದಾರೀಲಿ ಬೇರೆ ರಥಗಳು ಅಡ್ಡಬಂದು ತಡವಾಗಿದೆಯೋ ? ಅಚ್ಚೇನಾದರೂ ಮುರಿಯಿತೊ ? ದಾರಿ ತಪ್ಪಿತೊ ? ಏನಾಯಿತೊ. ತಿಳಿಯದಲ್ಲ.

ವರ್ಧಮಾನಕ (ಬಂದು) ಮೈತ್ರೇಯ !

ವಿದೂಷಕ ಆಹಾ ! ಬಂದನಲ್ಲ ! ಮಿತ್ರ, ವಸಂತಸೇನೆ ಬಂದಿರಬೇಕು. ಅಲ್ಲವೋ ವರ್ಧಮಾನಕ. ಯಾಕೆ ಇಷ್ಟು ತಡ ಮಾಡಿದೆ ?

ವರ್ಧಮಾನಕ ರಥದಲ್ಲಿ ಹಾಸೋ ಹಾಸಿಗೆಯನ್ನು ಮರೆತಿದ್ದೆ. ಅವನ್ನು ತರೋದಕ್ಕೆ ಮತ್ತೆ ಹೋಗಿದ್ದರಿಂದ ತಡವಾಯ್ತು.

ಚಾರುದತ್ತ ವರ್ಧಮಾನಕ, ರಥ ತಿರುಗಿಸು. ಮೈತ್ರೇಯ, ಆಕೆಯನ್ನು ಮೆಲ್ಲಗೆ ಇಳಿಸಿಕೊ.

ವಿದೂಷಕ ಅವಳೇ ಇಳಿಯುವುದಕ್ಕೆ ತೊಂದರೆ ಏನು ? ಕಾಲಲ್ಲಿ ಸಂಕೋಲೆ ಇದೆಯೇ ? (ರಥದ ಬಾಗಿಲು ತೆರೆದು) ಅಯ್ಯಯ್ಯೋ, ಗೆಳೆಯ ! ಇದೇನು ? ಇಲ್ಲಿರೋದು ವಸಂತಸೇನೆ ಅಲ್ಲ.

ಚಾರುದತ್ತ ಮತ್ತೆ ?

ವಿದೂಷಕ ವಸಂತಸೇನ !

ಚಾರುದತ್ತ ಹಾಸ್ಯಕ್ಕೆ ಸಮಯ ಇಲ್ಲವೆ ಮೈತ್ರೇಯ ? ಇರಲಿ ಬಿಡು. ನಾನೇ ಇಳಿಸ್ತೇನೆ. (ರಥ ಹತ್ತಿ ನೋಡಿ) (ಸ್ವಗತ) ಎಲಾ, ಯಾರೀ ತೇಜಸ್ವಿ? ಒಳ್ಳೇ ರಾಜಠೀವಿ ಇದೆಯಲ್ಲ ! ಇಂಥವನ ಕಾಲಲ್ಲಿ ಸಂಕೋಲೆ ಹೇಗೆ ಬಂತು ? (ಪ್ರಕಾಶ) ಅಯ್ಯಾ, ನೀನು ಯಾರು ಅಂತ ತಿಳೀಲಿಲ್ವಲ್ಲ ?

ಆರ್ಯಕ (ಸ್ವಗತ) ಇವನೇ ರಥದ ಯಜಮಾನ ಚಾರುದತ್ತ ಇರಬೇಕು. (ಪ್ರಕಾಶ) ಆರ್ಯ, ನಾನು ಆರ್ಯಕ ಎಂಬ ಗೋಪಾಲ. ಶರಣಾಗತನಾಗಿದೇನೆ. ನನ್ನನ್ನು ರಕ್ಷಣೆ ಮಾಡಬೇಕು.

ಚಾರುದತ್ತ ಪಾಲಕ ಮಹಾರಾಜ ಸೆರೆಯಲ್ಲಿ ಇಟ್ಟದ್ದು ನಿನ್ನನ್ನೇನೋ ?

ಆರ್ಯಕ ಹೌದು, ಆರ್ಯ.

ಚಾರುದತ್ತ ದೈವವೇ ನಿನ್ನನ್ನು ಇಲ್ಲಿಗೆ ತಂದಿದೆ. ನಾನು ಪ್ರಾಣವನ್ನಾದರೂ ಕೊಟ್ಟೇನು ಶರಣಾಗತನಾದ ನಿರಪರಾಧಿಯನ್ನು ಬಿಟ್ಟುಕೊಡೋಲ್ಲ. ವರ್ಧಮಾನಕ ಇವನ ಕಾಲಲ್ಲಿರೋ ಸಂಕೋಲೆ ತೆಗೆ.

ವರ್ಧಮಾನಕ ಆಗಲಿ ಸ್ವಾಮಿ (ತೆಗೆಯುವನು)

ಆರ್ಯಕ ಚಾರುದತ್ತ ಈ ಸಂಕೋಲೆಯಿಂದ ನಾನು ಮುಕ್ತನಾದೆ. ಆದರೆ ನಿನ್ನ ಸ್ನೇಹದಿಂದ ಬದ್ಧನಾದೆ. ನಿನ್ನ ರಥ ಹತ್ತಿ ಬಂದದ್ದಕ್ಕೆ ಕ್ಷಮಿಸು. ಅಪ್ಪಣೆ ಕೊಡು. ಬರ್ತೇನೆ.

ಚಾರುದತ್ತ ಒಳ್ಳೇದು ಮಿತ್ರ, ಹೋಗಿ ಬಾ. ಆದರೆ ಇಷ್ಟು ದಿನ ಕಾಲಲ್ಲಿ ಸಂಕೋಲೆ ಇದ್ದದ್ದರಿಂದ ಈಗ ಕೂಡಲೆ ಸರಿಯಾಗಿ ನಡೆಯೋದಕ್ಕೆ ಆಗಲಾರದು. ನೀನು ರಾಜದೂತರಿಗೆ ಸಿಕ್ಕಿಬೀಳಬಹುದು. ಆದ್ದರಿಂದ ರಥದಲ್ಲೇ ಹೋಗು.

ಆರ್ಯಕ (ಸಂತೋಷದಿಂದ) ಹಾಗೇ ಆಗಲಿ.

ಚಾರುದತ್ತ ನೀನು ಸುಖವಾಗಿ ನಿನ್ನ ಬಂಧುಗಳನ್ನು ಸೇರುವ ಹಾಗೆ ಆಗಲಿ.

ಆರ್ಯಕ ನೀನೇ ನನಗೆ ಬಂಧುವಲ್ಲವೆ ?

ಚಾರುದತ್ತ ಆಯಿತು, ಹೋಗಿ ಬಾ, ನನ್ನ ಜ್ಞಾಪಕವಿರಲಿ.

ಆರ್ಯಕ ಏನು ಮಾತು ಮಿತ್ರ ? ಯಾರಾದರೂ ತನ್ನನ್ನೇ ಮರೆಯೋದುಂಟೆ ? ಬರ್ತೇನೆ. (ಹೋಗುವನು)

ಚಾರುದತ್ತ ಮೈತ್ರೇಯ, ಪಾಲಕ ಮಹಾರಾಜನಿಗೆ ವಿರೋಧವಾಗಿ ನಡೆದು ನಾನು ಇಲ್ಲಿ ರೋದು ಸರಿಯಲ್ಲ. ಈ ಸರಪಳಿ ಯಾರ ಕಣ್ಣಿಗಾದರೂ ಬಿದ್ದೀತು, ತೆಗೆಸಿ ಹಾಳು ಬಾವಿಗೆ ಹಾಕಿಸು. ವಸಂತಸೇನೆಯನ್ನು ನೋಡೋ ಕುತೂಹಲ ಏಕೋ ತುಂಬ ಹೆಚ್ಚಾಗ್ತಿದೆ. ಎಡಗಣ್ಣು ಚಲಿಸ್ತಿದೆ. (ಮುಂದೆ ನೋಡಿ) ಎದುರಿಗೆ ಬೇರೆ ಯಾರೋ ಬೌದ್ಧ ಸನ್ಯಾಸಿ ಬರ್ತಿದ್ದಾನೆ. (ಯೋಚಿಸಿ) ಬುದರೆ ಬರಲಿ, ನಾವು ಹೋಗೋಣ. (ಹೋಗುವರು)

* * *

## ಎಂಟನೆಯ ಅಂಕ

(ಸ್ಥಾನ : ಉದ್ಯಾನ)

(ಪ್ರವೇಶ. ಕೈಯಲ್ಲಿ ಒದ್ದೆ ಬಟ್ಟೆ ಹಿಡಿದ ಭಿಕ್ಷು)

ಭಿಕ್ಷು ಅಪ್ಪಾ ಈ ಶರೀರ ನಿತ್ಯವಾದದ್ದಲ್ಲ. ಇಂದ್ರಿಯ ನಿಗ್ರಹ ಮಾಡಿ ಬುದ್ಧ ದೇವನನ್ನು ಸ್ಮರಿಸಿ ಧರ್ಮ ಸಂಪಾದಿಸಿ. (ಎರಡು ಹೆಜ್ಜೆ ಮುಂದೆ ಬಂದು) ಪುಷ್ಕರಿಣಿಯಲ್ಲಿ ಈ ಕಾವಿ ಬಟ್ಟೆ ಒಗೆದುಕೊಂಡು ಬರ್ತೇನೆ. (ತೆರೆಯಲ್ಲಿ) ಎಲೋ ನೀಚ ಸನ್ಯಾಸಿ ನಿಲ್ಲು.

ಭಿಕ್ಷು (ಭಯದಿಂದ ತೆರೆಯ ಪಕ್ಕವನ್ನು ನೋಡಿ) ಅಯ್ಯೋ ಶಕಾರನೇ ಬಂದನಲ್ಲಾ! ಒಬ್ಬ ಭಿಕ್ಷು ತಪ್ಪು ಮಾಡಿದರೆ ಸಾಕು, ಎಲ್ಲಿಲ್ಲಿ ಭಿಕ್ಷುಗಳು ಕಂಡರೂ ಕಾಡ್ತಾನೆ. ಇವನಿಂದ ಹೇಗೆ ಪಾರಾಗಲಿ ? ಬುದ್ಧನೇ ನನಗೆ ಶರಣು. (ಕತ್ತಿಹಿಡಿದ ವಿಟನ ಜೊತೆ ಶಕಾರ ಬರುವನು)

ಶಕಾರ ಲೋ ಅಯೋಗ್ಯ ? ನಿಲ್ಲೋ ಅಲ್ಲಿ. ಹೆಂಡದಂಗಡಿಯಲ್ಲಿ ಮಧ್ಯೆ ಬಂದ ಕೆಂಪುಮೂಲಂಗಿಯನ್ನು ಕತ್ತರಿಸೋ ಹಾಗೆ ನಿನ್ನ ತಲೆ ಕತ್ತರಿಸಿಬಿಡ್ತೇನೆ, (ಹೊಡೆಯುವನು)

ವಿಟ (ಅತ್ತ ಬಂದು) ಛೆ ಛೆ, ಸನ್ಯಾಸಿಗೆ ಹೀಗೆ ಹೊಡೀತಾರೆಯೆ ?

ಭಿಕ್ಷು ಉಪಾಸಕನೆ, ಕೋಪಮಾಡಿಕೋ ಬೇಡ.

ಶಕಾರ ನೋಡಿದೆಯಾ ? ನನ್ನನ್ನು ಅದೇನೋ ಬಯ್ತಿದಾನೆ.

ವಿಟ ಛೆ ಛೆ, ಬಯ್ಯಲಿಲ್ಲ. ಉಪಾಸಕ ಅಂದ. ನೀನು ಬುದ್ಧದೇವನ ಭಕ್ತ ಅಂತ ಸ್ತೋತ್ರ ಮಾಡಿದ ಅಷ್ಟೆ.

ಶಕಾರ ಇವನು ಇಲ್ಲಿಗೆ ಯಾಕೆ ಬಂದನಂತೆ ?

ಭಿಕ್ಷು ಈ ಕಾವಿ ಬಟ್ಟೆ ಒಗೆಯೋಣ ಅಂತ ಬಂದೆ ಅಷ್ಟೆ

ಶಕಾರ ಏಯ್ ಪೆದ್ದ, ಇದೇನು ನಿಮ್ಮಪ್ಪನ ತೋಟವ ? ನಮ್ಮ ದೊರೆ ಇಲ್ಲವೇನೊ, ನಮ್ಮ ಅಕ್ಕನ ಗಂಡ, ನನ್ನ ಭಾವ, ಅವನು ಈ ತೋಟವನ್ನು ನನಗೆ ಕೊಟ್ಟಿದಾನೆ—ಇದು ಎಲ್ಲಕ್ಕಿಂತ ಚೆನ್ನಾಗಿದೆ ಅಂತ. ಇಲ್ಲಿ ನಾಯಿ ನರಿ ಮಾತ್ರ ನೀರು ಕುಡಿಯುತ್ತವೆ. ಇಷ್ಟು ದೊಡ್ಡ ಮನುಷ್ಯನಾದ ನಾನು ಸಹ ಇಲ್ಲಿ ಸ್ನಾನ ಮಾಡೋದಿಲ್ಲ. ಅಂಥದರಲ್ಲಿ ಹಳಸಿದ ಕೇಸಕ್ಕಿ ಗಂಜಿ ಹಾಗೆ ದುರ್ವಾಸನೆ ಹೊಡೀತಾ ಇರೋ ನಿನ್ನ ಬಟ್ಟೇನ ಇಲ್ಲಿ ಒಗೀತೀಯೇನೊ ? ಒಂದೇ ಏಟಿಗೆ ತಲೆ ಹಾರಿಸಿಬಿಡ್ತೇನೆ ನೋಡ್ತಿರು.

ವಿಟ ಪಾಪ. ಬಿಟ್ಟುಬಿಡಯ್ಯ. ಎಲ್ಲೋ ಹೊಸದಾಗಿ ಸನ್ಯಾಸಿಯಾದವನಂತೆ ಕಾಣ್ತಾನೆ.

ಭಿಕ್ಷು ಹೌದು ಸ್ವಾಮಿ, ಮೊನ್ನೆಯಷ್ಟೆ ಸನ್ಯಾಸ ತೆಗೆದುಕೊಂಡೆ.

ಶಕಾರ ಎಂಥ ಅಯೋಗ್ಯನೋ ನೀನು ? ಹುಟ್ಟುತ್ತಲೇ ಯಾಕೆ ಸನ್ಯಾಸ ತಗೊಳ್ಳಲಿಲ್ಲ? (ಹೊಡೆಯುವನು)

ಭಿಕ್ಷು ಬುದ್ಧೇಶ ! ಬುದ್ಧೇಶ ! (ಕೂಗಿಕೊಳ್ಳುವನು)

ವಿಟ ಈ ಬಡಪಾಯೀನ ಯಾಕೆ ಹೊಡೀತೀಯಪ್ಪ ? ಬಿಟ್ಟುಬಿಡಬಾರದೆ ?

ಶಕಾರ ತಾಳು, ಸ್ವಲ್ಪ ಚರ್ಚಿಸಿ ತೀರ್ಮಾನಿಸ್ತೇನೆ.

ವಿಟ ಯಾರ ಜೊತೆ ?

ಶಕಾರ ನನ್ನ ಹೃದಯದ ಜೊತೆ.

ವಿಟ ಅದು ಇನ್ನೂ ಇದೆಯೆ ?

ಶಕಾರ ಎಲೈ ಹೃದಯವೆ ಹೇಳು, ಈ ಸನ್ಯಾಸಿ ಇರಲೋ, ತೊಲಗಲೋ ?

ವಿಟ ಹೃದಯ ಏನು ಹೇಳಿತಪ್ಪ ?

ಶಕಾರ ಇರೋದೂ ಬೇಡ, ಹೋಗೋದೂ ಬೇಡ ; ಸಾಯೋದೂ ಬೇಡ, ಬದುಕೋದೂ ಬೇಡ. ಇಲ್ಲಿಯೇ ತಟ್ಟನೆ ಬಿದ್ದು ಕೂಡಲೆ ಪ್ರಾಣ ಬಿಡಲಿ ಅಂತ.

ವಿಟ ಪಾಪ ಬಿಟ್ಟುಬಿಡಯ್ಯ ಹೋಗಲಿ.

| | |
|---|---|
| ಶಕಾರ | ಒಂದು ಷರತ್ತಿನ ಮೇಲೆ. |
| ವಿಟ | ಏನು ಷರತ್ತಪ್ಪ ? |
| ಶಕಾರ | ಕೆಸರಾಗದ ಹಾಗೆ ಮಣ್ಣನ್ನು ನೀರೊಳಕ್ಕೆ ಹಾಕಲಿ. ಇಲ್ಲ, ನೀರನ್ನೆಲ್ಲ ಕೂಡಿಸಿ ಮಣ್ಣೊಳಗೆ ತೂರಲಿ. |
| ವಿಟ | (ಸ್ವಗತ) ಆಹ ! ಎಂಥ ಮೇಧಾವಿ ! ಇಂಥ ಮೂರ್ಖರಿಂದಲೇ ಭೂಮಿಯ ಭಾರ ಹೆಚ್ಚಿರೋದು. |
| ಭಿಕ್ಷು | (ಶಕಾರನಿಗೆ) ಸ್ವಾಮೀ, ತಮಗೆ ಶರಣಾಗತನಾಗಿದೇನೆ. ಕಾಪಾಡಿ. |
| ಶಕಾರ | (ವಿಟನಿಗೆ) ಈತ ಏನು ಹೇಳ್ತಿದಾನೆ ? |
| ವಿಟ | ನಿನ್ನನ್ನು ಹೊಗಳ್ತಿದಾನೆ ? |
| ಶಕಾರ | (ಸಂತೋಷಗೊಂಡು) ಹೊಗಳು, ಹೊಗಳು, ಇನ್ನೂ ಹೊಗಳು. (ಮೊರೆಯಿಡುತ್ತಲೇ ಭಿಕ್ಷು ಓಡಿಹೋಗುವನು) |
| ಶಕಾರ | ಭಾವ, ಇನ್ನೂ ನನ್ನ ಮನಸ್ಸು ಆ ವಸಂತಸೇನೆಯನ್ನೇ ನೆನೀತಾ ಇದೆ. |
| ವಿಟ | (ಸ್ವಗತ) ಆಕೆ ಅಷ್ಟು ತಿರಸ್ಕಾರ ಮಾಡಿದರೂ ಅವಳನ್ನೇ ಹಂಬಲಿಸ್ತಾನಲ್ಲ, ನಿರ್ಲಜ್ಜ ! |
| ಶಕಾರ | ಬೇಗ ರಥ ತಗೊಂಡು ಬಾ ಅಂತ ಸ್ಥಾವರಕನಿಗೆ ಹೇಳಿದ್ದೆ. ಮಧ್ಯಾಹ್ನ ಆಯಿತು. ಅವನೋ ಇನ್ನೂ ಬರ್ತಾನೇ ಇದಾನೆ. ಬಿಸಿಲು ಉರೀತಾ ಇದೆ. ನಡಕೊಂಡು ಹೋಗೋ ಹಾಗೂ ಇಲ್ಲ. ಹೊಟ್ಟೆ ತಾಳ ಹಾಕ್ತಿದೆ. ಈಗ ಏನು ಮಾಡಲಿ ? ಒಂದು ಹಾಡಾದರೂ ಹೇಳ್ತೀನಿ. (ಕೆಟ್ಟರೀತಿಯಲ್ಲಿ ಅಪಸ್ವರದಲ್ಲಿ ಸಂಗೀತ ವಿದ್ವಾಂಸರಂತೆ ಅಂಗಚೇಷ್ಟೆ ಮಾಡಿಕೊಂಡು ಹಾಡುವನು) |

ನಾನೆಂದರೆ ಬಿಟ್ಟಿ ಬಂತೆ
ರಾಜ್ಯಕ್ಕೇ ಮೈದುನ
ಮುಖ ಕಂಡರೆ ಸಾಕು ನಡುಗಿ
ಕೈಮುಗಿಯುವರೋ ಜನ
ಧೀಮಂತರು ಭಯಂಪಡುವರು
ಕುಡು ನನ್ನ ಜ್ಞಾನ
ರಾಜ ಮಂತ್ರಿ ಸೇನೆ ಎಲ್ಲ
ನಾನೆ ರಾಜ ಮೈದುನ

ನಾನೆ ರಾಜ ಮೈದುನ
ನಾನೆ ರಾಜ ಮೈದುನ

ಶಕಾರ ಹೇಗಿದೆ ಭಾವ ಹಾಡು ?

ವಿಟ ಕೇಳಿ ಕಿವಿ ಪಾವನ ಆಯ್ತಪ್ಪ.

ಶಕಾರ ಅಷ್ಟೇ ಅಲ್ಲ.

ಎತ್ತು ನಾಯಿ ಆಲೈಸುವುವು
ಮೆಚ್ಚಿ ನನ್ನ ಗಾನ
ಕತ್ತೆ ಎಮ್ಮೆ ಮೈಯ ಮರೆತು
ಮಾಡುವುವೋ ಧ್ಯಾನ
ಕೋಗಿಲೆಗಳ ಕೊಂದು ಮಾಂಸ
ತಿಂದು ನನ್ನ ಕಂಠ
ಗಂಧರ್ವರ ನಾಚಿಸಿತೋ
ಕೇಳೆಲವೋ ಭಂಟ — ನಾನ
ರಾಜ ಭಾವ ನೆಂಟ

ರಾಜ ಭಾವ ನೆಂಟ
ರಾಜ ಭಾವ ನೆಂಟ

ಹೇಗಿತ್ತು ಭಾವ ಹಾಡಿದ್ದು ?

ವಿಟ ಕೇಳಬೇಕೇನಪ್ಪ ! ಸಾಕ್ಷಾತ್ ಗಂಧರ್ವನೇ ಕಛೇರಿ ಮಾಡಿದ ಹಾಗಿತ್ತು.

ಶಕಾರ ಅಷ್ಟಲ್ಲದೆ ? ಆದರೆ ಅದಕ್ಕಾಗಿ ಎಷ್ಟು ಕೋಗಿಲೆಗಳನ್ನು ಕೊಂದು ಮಾಂಸ ತಿಂದಿದೇನೆ ಗೊತ್ತೊ ? ಅದಿರಲಿ ಈ ದರಿದ್ರ ಸ್ಥಾವರಕ ಇನ್ನೂ ಬರಲಿಲ್ಲವಲ್ಲ ಭಾವ ?

ವಿಟ ಬಂದಾನು ಕೊಂಚ ಕಾಯೋಣ.

ಶಕಾರ (ಚಕ್ರದ ಸದ್ದು ಕೇಳಿ) ಅಗೋ ಭಾವ ರಥ ಬಂತು.

ವಿಟ ಎಲ್ಲಿ ಬಂತು ?

ಶಕಾರ ಮುದಿ ಹಂದಿ ಹಾಗೆ ಘುರ್ ಘುರ್ ಅಂತ ಶಬ್ದ ಮಾಡ್ತಿದೆ. ಕಾಣಿಸಲ್ವ ?

(ಸ್ಥಾವರಕನ ಪ್ರವೇಶ)

ಶಕಾರ ಎಲೋ ಮಗನೆ ಸ್ಥಾವರಕ, ಬಂದೆಯೇನೋ ?

ಸ್ಥಾವರಕ ಬಂದೆ ಸ್ವಾಮಿ.

ಶಕಾರ ರಥವೂ ಬಂತು ತಾನೆ ?

ಸ್ಥಾವರಕ ಬಂತು ಸ್ವಾಮಿ.

ಶಕಾರ ಎತ್ತುಗಳೂ ಬಂದುವೊ ?

ಸ್ಥಾವರಕ ಹೌದು ಬಂದುವು.

ಶಕಾರ  ನೀನೂ ಬಂದಯೇನಪ್ಪ ?

ಸ್ಥಾವರಕ  (ನಗುತ್ತ) ಹೌದು ನಾನೂ ಬಂದೆ.

ಶಕಾರ  ಹಾಗಾದರೆ ರಥ ಒಳಕ್ಕೆ ಬಿಡು.

ಸ್ಥಾವರಕ  ಯಾವ ದಾರಿಯಿಂದ ಬಿಡಲಿ ?

ಶಕಾರ  ಈ ಗೋಡೆಯ ಮೇಲೆ ಬಿಡು.

ಸ್ಥಾವರಕ  ಹಾಗೆ ಮಾಡಿದರೆ ಎತ್ತು ಸಾಯುತ್ತವೆ, ನಾನೂ ಸಾಯ್ತೇನೆ.

ಶಕಾರ  ಎಲೋ ನಾನು ದೊರೆಯ ಭಾವಮೈದುನ. ಎತ್ತು ಸತ್ತರೆ ಹೊಸದನ್ನು ತಗೋತೇನೆ. ರಥ ಮುರಿದರೆ ಹೊಸದನ್ನು ಮಾಡಿಸ್ತೇನೆ. ನೀನು ಸತ್ತರೆ ಮತ್ತೊಬ್ಬನನ್ನು ಇಟ್ಟುಕೋತೇನೆ.

ಸ್ಥಾವರಕ  ಅದೇನೋ ಸರಿ. ದೊಡ್ಡವರಾದ ತಮಗೆ ಅಸಾಧ್ಯ ಯಾವುದು ? ಆದರೆ ನನಗೆ ತಮ್ಮ ಆತ್ಮೀಯನಾಗಿ ಉಳಿಯುವ ಅದೃಷ್ಟವಿಲ್ಲದೆ ಹೋಗುತ್ತೆ.

ಶಕಾರ  ಸರಿ. ನಿನಗೆ ಹೇಗೆ ಬೇಕೋ ಹಾಗೆ ಮಾಡು.

ಸ್ಥಾವರಕ  (ಹೊರಗೆ ಹೋಗಿ ಒಂದು ಕ್ಷಣ ಬಿಟ್ಟು ಬಂದು) ಸ್ವಾಮೀ ರಥ ಬಂತು.

ಶಕಾರ  (ವಿಟನಿಗೆ) ಅಯ್ಯಾ ನೀನು ನನಗೆ ಗುರು. ಪರಮಗುರು. ಆದ್ದರಿಂದ ನೀನೇ ಮೊದಲು ರಥ ಹತ್ತು.

ವಿಟ  ಆಗಲಿ ಅದಕ್ಕೇನು ? (ರಥ ಹತ್ತಲು ಹೋಗುವನು)

ಶಕಾರ  ಏಯ್, ನಿಲ್ಲು ! ರಥ ನಿಮ್ಮಪ್ಪನ ಮನೇದೋ ? ಈ ರಥದ ಯಜಮಾನ ನಾನು. ನಾನು ಮೊದಲು ಹತ್ತಬೇಕು.

ವಿಟ  ಮೊದಲು ಹತ್ತು ಅಂತ ನೀನೇ ಅಂದೆಯಲ್ಲಪ್ಪ ?

ಶಕಾರ  ಅಂದೆ, ಹೌದು. ಆದರೆ ನೀನು. "ಸ್ವಾಮೀ, ಯಜಮಾನರೆ ತಾವೇ ಮುಂಚೆ ಹತ್ತಿ" ಅಂತ ಹೇಳಬೇಕು.

ವಿಟ  ಸರಿ, ನೀನೇ ಹತ್ತು.

ಶಕಾರ  ಆಗಲಿ, ನೀನು ಹೇಳಿದ್ದರಿಂದ ಹತ್ತುತೀನಿ. ಕಂದ, ಸ್ಥಾವರಕ. ಗಾಡಿ ತಿರುಗಿಸಪ್ಪ !

ಸ್ಥಾವರಕ  ಆಯಿತು. ಅಯ್ಯಾ, ಇನ್ನು ತಾವು ಹತ್ತಬಹುದು.

ಶಕಾರ  (ಹತ್ತಿದವನೇ ಗಾಬರಿಯಾಗಿ ಕೆಳಗೆ ಹಾರಿ ಓಡಿ ಬಂದು ವಿಟನ ಕೊರಳಿಗೆ ಜೋತು ಬಿದ್ದು)

ಭಾವ. ಭಾವ ! ಸತ್ತೆ ! ಗಾಡಿಯೊಳಗೆ ಕಳ್ಳನೋ ರಾಕ್ಷಸಿಯೋ ಸೇರಿಕೊಂಡು ಬಿಟ್ಟದೆ. ಕಳ್ಳನಾಗಿದ್ದರೆ ನಮ್ಮಿಬ್ಬರನ್ನೂ ತಿಂದುಬಿಡುತ್ತೆ, ರಾಕ್ಷಸಿಯಾಗಿದ್ದರೆ ಇಬ್ಬರನ್ನೂ ಕದ್ದುಬಿಡತ್ತೆ.

ವಿಟ — ಅಷ್ಟು ಹೆದರಬೇಡ. ಈ ಎತ್ತಿನ ಬಂಡಿಯಲ್ಲಿ ರಾಕ್ಷಸಿ ಯಾಕೆ ಬಂದಾಳು ಬಿಸಿಲ ಜಳ. ನಿನಗೆ ಸರಿಯಾಗಿ ಕಂಡಿಲ್ಲ. ಸ್ಥಾವರಕನ ನೆರಳು ನೋಡಿ ಹೆದರಿ ಕೊಂಡೆಯೊ ಏನೊ. ನಾನೇ ನೋಡ್ತೇನೆ ಇರು.

ಶಕಾರ — ನನಗಂತೂ ಭಯ. ನಿನ್ನನ್ನು ಹಲ್ಲುಗಳಿಂದ ನೋಡಿ, ಕಣ್ಣುಗಳಿಂದ ಕಿತ್ತುಕೊಂಡು ತಿನ್ನುವಷ್ಟರಲ್ಲೇ ನಾನು ಓಡಿ ಹೋಗ್ತೇನೆ.

ವಿಟ — (ರಥ ಹತ್ತಿ ವಸಂತಸೇನೆಯನ್ನು ಕಂಡು ವಿಷಾದಗೊಂಡು) (ಸ್ವಗತ) ಛೆ ಛೆ ! ಇದೀಗ ಕಷ್ಟ. ಇವಳು ವಸಂತಸೇನೆ ಅಲ್ಲವೆ ? ಈಕೆ ಇವನ ಹತ್ತಿರ ಬಂದದ್ದು ಹೆಣ್ಣು ಜಿಂಕೆ ಹುಲಿಯ ಹತ್ತಿರ ಬಂದಂತಾಯ್ತು. (ಮರೆಯಲ್ಲಿ) ವಸಂತಸೇನೆ ಇದು ಸರಿಯಲ್ಲ. ಹಿಂದೆ ನಿನ್ನ ತಾಯಿ ಹಣಕ್ಕೆ ಆಸೆಪಟ್ಟು ಶಕಾರನನ್ನು ವರಿಸು ಅಂತ ಹೇಳಿದಾಗ ನೀನು ಮಾನವನ್ನೇ ಹಿರಿದಾಗಿ ಭಾವಿಸಿ ಇವನನ್ನು ತಿರಸ್ಕರಿಸಿದೆ. ಈಗ ಮತ್ತೆ ಇವನ ಹತ್ತಿರಕ್ಕೇ ಬರಬಹುದೆ ?

ವಸಂತಸೇನೆ — ಮೋಸವಾಯ್ತು. ರಥ ನನ್ನದು ಅಂತ ಭಾವಿಸಿ ಇದರಲ್ಲಿ ಹತ್ತಿಬಿಟ್ಟೆ. ಏನಾದರೂ ಮಾಡಿ ನನ್ನನ್ನು ಈತನಿಂದ ಪಾರುಮಾಡು.

ವಿಟ — ಹೆದರಬೇಡ. ಪ್ರಯತ್ನಿಸ್ತೇನೆ. (ಶಕಾರನ ಹತ್ತಿರಕ್ಕೆ ಬಂದು) ಅಯ್ಯಾ, ನೀನು ಹೇಳಿದ್ದು ನಿಜ. ರಥದಲ್ಲಿ ಇರೋದು ರಾಕ್ಷಸಿಯೇ.

ಶಕಾರ — ರಾಕ್ಷಸಿಯೇ ಆಗಿದ್ದರೆ ನಿನ್ನನ್ನು ಏಕೆ ಕದೀಲಿಲ್ಲ ? ಅಥವಾ ಕಳ್ಳನಾಗಿದ್ದರೆ ಏಕೆ ಕೊಲ್ಲಲಿಲ್ಲ ?

ವಿಟ — (ಸ್ವಗತ) ಎಷ್ಟು ಬುದ್ಧಿವಂತ ! ಏನು ಚೆನ್ನಾಗಿ ಮಾತಾಡ್ತಾನೆ ! (ಪ್ರಕಾಶ) ಅದೇನೋ. ಅಷ್ಟೊಂದು ಪರೀಕ್ಷೆ ಯಾಕೆ ಹೇಳು ? ನಡಕೊಂಡೇ ಹೋಗೋಣ.

ಶಕಾರ — ಯಾಕೆ ನಡಕೊಂಡು ಹೋಗಬೇಕು ?

ವಿಟ — ಎತ್ತುಗಳಿಗೆ ಆಯಾಸ ಕಡಮೆ ಆಗುತ್ತೆ. ನಮಗೂ ಕಾಲಿಗೆ ಬಲ ಬರುತ್ತೆ.

ಶಕಾರ — ಹಾಗೇ ಆಗಲಿ. ಲೋ. ಸ್ಥಾವರಕ. ರಥ ತಗೊಂಡು ಹೋಗು. ಬೇಡ ಬೇಡ, ರಥದಲ್ಲೇ ಹೋಗ್ತೇನೆ. ನನ್ನನ್ನು ನೋಡಿದವರೆಲ್ಲ ದೊರೆಯ ಮೈದುನ ಬಂದ ಅಂತ ಗೌರವ ತೋರಿಸಬೇಕು.

ವಿಟ — (ಸ್ವಗತ) ಈ ಮೂರ್ಖನನ್ನು ಒಪ್ಪಿಸೋದು ಕಷ್ಟ. (ಪ್ರಕಾಶ) ಲೋ ಶಕಾರ, ವಸಂತಸೇನೆ ನಿನ್ನಲ್ಲಿ ಮೋಹಗೊಂಡು ಬಂದಿದ್ದಾಳೆ.

ವಸಂತಸೇನೆ — (ಸ್ವಗತ) ಶಿವ ಶಿವ ! (ಕಿವಿ ಮುಚ್ಚಿಕೊಳ್ಳುವಳು)

ಶಕಾರ — ಏನಂದೆ ಭಾವ ? ಪುರುಷಶ್ರೇಷ್ಠನಾದ ನನ್ನಲ್ಲಿ ವಸಂತಸೇನೆ ಮೋಹಗೊಂಡು ಬಂದಿದ್ದಾಳೆಯೇ ?

ವಿಟ — ಹೌದು ಕಣಪ್ಪ.

**ಶಕಾರ** ಹಿಂದೆ ಚಾರುದತ್ತನ ಮನೆಗೆ ಹೋಗಿದ್ದಾಗ ಅವಳಿಗೆ ಕೋಪ ಬರೋ ಹಾಗೆ ಮಾಡಿದ್ದೆ. ಈಗ ಕಾಲಿಗೆ ಬಿದ್ದು ಒಲಿಸಿಕೊಳ್ತೇನೆ.

**ವಿಟ** ಸರಿಸರಿ. ಹಾಗೇ ಮಾಡು.

**ಶಕಾರ** (ವಸಂತಸೇನೆಯ ಹತ್ತಿರಕ್ಕೆ ಬಂದು) ನಮ್ಮಮ್ಮ, ತಾಯಿ ನನ್ನ ಬಿನ್ನಹ ಕೇಳು. ಹಿಂದೆ ನಾನು ನಿನ್ನ ಬಗ್ಗೆ ತಪ್ಪಾಗಿ ನಡಕೊಂಡಿದ್ದೆ. ಅದನ್ನೆಲ್ಲ ಕ್ಷಮಿಸು. ದಾಸನಾದ ನನ್ನಲ್ಲಿ ಅನುಗ್ರಹ ಮಾಡು ತಾಯಿ. ಇಗೋ ಕಾಲಿಗೆ ಬಿದ್ದೆ (ನಮಸ್ಕರಿಸುತ್ತಾನೆ)

**ವಸಂತಸೇನೆ** ಛಿ! ತೊಲಗು ನೀಚ! ಹೊಲಸು ಮಾತು ಆಡ್ತೀಯಾ? (ಕಾಲಿನಿಂದ ಒದೆಯುವಳು)

**ಶಕಾರ** (ಕೋಪದಿಂದ) ಎಲಾ ಇವಳ! ದೇವರಿಗೂ ಸಹ ನಮಸ್ಕಾರ ಮಾಡದ ನಾನು ಇವಳ ಕಾಲಿಗೆ ಬಿದ್ದರೆ ಒದೀತಿದಾಳಲ್ಲ! ಲೋ ಸ್ಥಾವರಕ. ಇವಳು ಎಲ್ಲಿ ಸಿಕ್ಕಿದಳೊ ನಿನಗೆ?

**ಸ್ಥಾವರಕ** ನಾನು ಇಲ್ಲಿಗೆ ಬರ್ತಿದ್ದಾಗ ದಾರಿಯಲ್ಲಿ ಅಡ್ಡಲಾಗಿ ಅನೇಕ ರಥ ಇದ್ದುವು. ಸ್ವಲ್ಪ ಹೊತ್ತು ಚಾರುದತ್ತನ ಮನೆ ಬಾಗಿಲಲ್ಲಿ ರಥ ನಿಲ್ಲಿಸಬೇಕಾಗಿ ಬಂತು. ಆಗ ಇದು ತನ್ನ ರಥ ಅಂತ ಭಾವಿಸಿ ಈಕೆ ರಥ ಹತ್ತಿರಬಹುದು.

**ಶಕಾರ** ಓಹೊ! ಹಾಗೆ ಬಂದದ್ದೋ ಇಲ್ಲಿಗೆ? ನನಗಾಗಿ ಅಲ್ಲ. (ರಥದೊಳಗಿರುವ ವಸಂತಸೇನೆಗೆ) ಏ ತೊತ್ತೆ. ಬಂಡಿ ಬಿಟ್ಟು ಇಳಿ. ಆ ದರಿದ್ರ ಚಾರುದತ್ತನನ್ನು ಹುಡುಕಿಕೊಂಡು ಬಂದು ನನ್ನ ಎತ್ತುಗಳಿಗೆ ಕಷ್ಟ ಕೊಟ್ಟೆಯಾ? ಇಳಿ, ಮೊದಲು.

**ವಸಂತಸೇನೆ** (ಸ್ವಗತ) ಚಾರುದತ್ತನಿಗಾಗಿ ಬಂದೆ ಎನ್ನುವ ಮಾತಿನಿಂದ ನನಗೆ ನಿಜವಾಗಿ ಸಂತೋಷವಾಗಿದೆ. ಇನ್ನು ಏನು ಬೇಕಾದರೂ ಆಗಲಿ.

**ಶಕಾರ** ಲೇ ಗುಲಾಮಗಿತ್ತಿ! ಈಗ ನಿನ್ನ ಮುಂದಲೆ ಹಿಡಿದು ಜಟಾಯು ಆ ವಾಲಿಯ ಹೆಂಡತಿಗೆ ಮಾಡಿದನಲ್ಲ ಹಾಗೆ ಮಾಡ್ತೇನೆ. (ಮುಂದಲೆಗೆ ಕೈ ಹಾಕುತ್ತಾನೆ)

**ವಿಟ** (ಅಡ್ಡ ಬಂದು) ಅಯ್ಯಾ. ಈಕೆ ಗುಣವಂತೆ. ಹಾಗೆಲ್ಲ ಅವಮಾನಿಸಬಾರದು. ನೀನು ಸುಮ್ಮನೆ ಇರು. ನಾನು ಆಕೆಯನ್ನು ಇಳಿಸ್ತೇನೆ. (ವಸಂತಸೇನೆಗೆ) ಅಮ್ಮ, ವಸಂತಸೇನೆ ಕೆಳಗೆ ಇಳಿಯಮ್ಮ.

(ವಸಂತಸೇನೆ ಇಳಿದು ಬಂದು ಬದಿಗೆ ನಿಲ್ಲುವಳು)

**ಶಕಾರ** (ಸ್ವಗತ) ಹಿಂದೆ ಇವಳು ನನ್ನ ಮಾತನ್ನು ತಿರಸ್ಕರಿಸಿ ನನ್ನಲ್ಲಿ ರೋಷ ಹೊತ್ತಿದ್ದಳು. ಈಗ ಕಾಲಿನಿಂದ ಒದ್ದು ಅದು ಉರಿಯೋ ಹಾಗೆ ಮಾಡಿದಾಳೆ. ಆದ್ದರಿಂದ ಇವಳನ್ನು ಕೊಂದೇ ಬಿಡ್ತೇನೆ. (ಪ್ರಕಾಶ) ಅಯ್ಯಾ ನಿನಗೆ ಬೇಕಾದ್ದು ಕೊಡ್ತೇನೆ. ನನಗೋಸ್ಕರ ಒಂದು ಕೆಲಸ ಮಾಡು.

ವಿಟ — ಅಕಾರ್ಯವಲ್ಲದಿದ್ದರೆ ಅಗತ್ಯವಾಗಿ ಮಾಡ್ತೇನೆ.

ಶಕಾರ — ನಾನು ಅಕಾರ್ಯ ಮಾಡಿಸುವವನೇ ಅಲ್ಲ.

ವಿಟ — ಹಾಗಿದ್ದರೆ ಹೇಳು.

ಶಕಾರ — ಈ ವಸಂತಸೇನೆಯನ್ನು ಮುಗಿಸು.

ವಿಟ — ಶಿವ ಶಿವ ! (ಕಿವಿ ಮುಚ್ಚಿಕೊಂಡು) ಇವಳು ಉಜ್ಜಯಿನಿಗೇ ತಿಲಕಪ್ರಾಯವಾದ ಹೆಣ್ಣು. ಸಚ್ಚರಿತ್ರೆ. ಇಂಥವಳನ್ನು ಕೊಂದು ಯಾವ ದಾರಿಯಿಂದ ಪರಲೋಕಕ್ಕೆ ಹೋಗಲಿ ?

ಶಕಾರ — ಲೋ ಮೂರ್ಖ, ಪರಲೋಕದ ಯೋಚನೆ ಬಿಡು. ಅದಕ್ಕೆ ಹೋಗಲು ನಾನು ದಾರಿ ಮಾಡಿಸಿಕೊಡ್ತೇನೆ. ಅಲ್ಲದೆ ನೀನು ಕೊಂದದ್ದನ್ನು ಯಾರು ತಾನೆ ನೋಡ್ತಾರೆ ?

ವಿಟ — ಉಂಟೆ ? ಸೂರ್ಯ ಚಂದ್ರ ವಾಯು ವನದೇವಿ ಎಲ್ಲರೂ ನೋಡೋದಿಲ್ವೆ ?

ಶಕಾರ — ಬಟ್ಟೆ ಅಡ್ಡಮಾಡಿಕೊಂಡು ಕೊಂದುಬಿಡು.

ವಿಟ — ಮೂಢ, ನೀನು ಹಾಳಾದೆ.

ಶಕಾರ — ಇವನು ಧರ್ಮಕ್ಕೆ ಅಂಜುವ ಮುದಿಗೂಬೆ. ಸ್ಥಾವರಕನೇ ವಾಸಿ. (ಸ್ಥಾವರಕನ ಕಡೆ ತಿರುಗಿ) ಲೋ ಸ್ಥಾವರಕ,

ಸ್ಥಾವರಕ — ಏನು ಸ್ವಾಮಿ ?

ಶಕಾರ — ಇವಳನ್ನು ಕೊಲ್ಲು.

ಸ್ಥಾವರಕ — ರಾಮ ರಾಮ ! ಸ್ವಾಮಿ, ಕೋಪ ಮಾಡಿಕೋಬೇಡಿ. ನೀಚನಾದ ನಾನೇ ಈಕೆ ಇಲ್ಲಿಗೆ ಬರಲು ಕಾರಣ, ತಿಳಿಯದೆ ಕರಕೊಂಡು ಬಂದೆ. ದಯವಿಟ್ಟು ಅಂಥ ಕೆಲಸ ಹೇಳಬೇಡಿ.

ಶಕಾರ — ನಾನು ನಿನಗೆ ಯಜಮಾನ ಹೌದೊ ಅಲ್ಲವೊ ?

ಸ್ಥಾವರಕ — ಹೌದು, ಆದರೆ ಶರೀರಕ್ಕೆ ಮಾತ್ರ. ನನ್ನ ಪುಣ್ಯಪಾಪಕ್ಕಲ್ಲ.

ಶಕಾರ — ಎಲೋ ನನ್ನ ಸೇವಕನಾಗಿ ನನ್ನ ಮಾತನ್ನೇ ಮೀರ್ತೀಯಾ ? (ಹೊಡೆಯುವನು)

ಸ್ಥಾವರಕ — (ಏಟನ್ನು ಸಹಿಸಿಕೊಳ್ಳುತ್ತ) ಬೇಕಾದಷ್ಟು ಹೊಡೀರಿ. ಕೊಂದೇಹಾಕಿಬಿಡಿ. ಚಿಂತೆಯಿಲ್ಲ. ಇಂಥ ಅಕಾರ್ಯ ಮಾತ್ರ ಮಾಡಲಾರೆ. ಹಿಂದೆ ಯಾವ ಪಾಪ ಮಾಡಿದ್ದೆನೊ, ನಿಮಗೆ ಸೇವಕನಾಗಿದೀನಿ. ಇನ್ನೊಮ್ಮೆ ಅಂಥ ಪಾಪ ಮಾಡಲೆ ?

ಶಕಾರ — (ಸ್ವಗತ) ಅವನು ಅಧರ್ಮಕ್ಕೆ ಅಂಜುತಾನೆ. ಇವನೂ ಪಾಪಕ್ಕೆ ಬೆದರ್ತಾನೆ. ನಾನು ದೊರೆಯ ಭಾವಮೈದ. ಯಾವುದಕ್ಕೆ ತಾನೇ ಹೆದರ್ಬೇಕು ? (ಪ್ರಕಾಶ) ಲೋ ಸ್ಥಾವರಕ, ನೀನು ಎಲ್ಲಾದರೂ ಏಕಾಂತಸ್ಥಳಕ್ಕೆ ಹೋಗಿ ವಿಶ್ರಾಂತಿ ತಗೊ. (ಸ್ಥಾವರಕ ಹೋಗುವನು)

ಶಕಾರ ಏ ತೊತ್ತೆ, ವಸಂತಸೇನೆ! ಅಲ್ಲೇ ನಿಲ್ಲು, ನಿನ್ನನ್ನೀಗ ಮುಗಿಸಿಬಿಡ್ತೇನೆ.

ವಿಟ (ಮುಂದೆ ಬಂದು) ಹುಚ್ಚ! ನನ್ನ ಮುಂದೇ ಕೊಲ್ತೀಯಾ? (ಶಕಾರನನ್ನು ಹೊಡೆಯುವನು)

ಶಕಾರ (ನೆಲದ ಮೇಲೆ ಬಿದ್ದು) ಅಯ್ಯೋ, ಅಮ್ಮಾ! ಇವನು ನನ್ನನ್ನ ಕೊಲ್ತಾನಲ್ಲಪ್ಪ. (ಚೇತರಿಸಿಕೊಂಡು ತನ್ನಲ್ಲಿ) ಈ ದುಷ್ಟ ನನ್ನ ಅನ್ನ ತಿಂದು ನನಗೇ ದ್ರೋಹ ಮಾಡ್ತಾನಲ್ಲ! (ಯೋಚಿಸಿ ಸ್ವಗತ) ಹ್ಞಾ! ಇದಕ್ಕೆ ಒಂದು ಹಂಚಿಕೆ ಮಾಡ್ತೇನೆ. (ಪ್ರಕಾಶ) ಅಯ್ಯಾ ವಿಟ! ನೀನು ಇಲ್ಲಿದ್ದರೆ ಇವಳು ನನ್ನ ಒಪ್ಪಿಕೊಳ್ಳೋದಕ್ಕೆ ನಾಚ್ತಾಳೆ. ಆದ್ದರಿಂದ ಈಗ ಹೋಗಿ ನಾನು ಕಳಿಸಿರೋ ಸ್ಥಾವರಕನನ್ನು ಕರಕೊಂಡು ಬಾ.

ವಿಟ (ಸ್ವಗತ) ಯಾರಿಗೆ ಗೊತ್ತು? ನಾನು ಇಲ್ಲಿದೀನಿ ಅಂತ ಈಕೆ ಈ ಶಕಾರನ ಜೊತೆ ಮಾತಾಡೋದಕ್ಕೆ ಸಂಕೋಚಪಡ್ತಿದಾಳೊ ಏನೊ. (ಪ್ರಕಾಶ) ಹಾಗೇ ಆಗಲಿ. (ಹೊರಡುವನು)

ವಸಂತಸೇನೆ (ವಿಟನ ಶಲ್ಯವನ್ನು ಹಿಡಿದು, ಮರೆಯಲ್ಲಿ) ಅಯ್ಯಾ ಅಂಗಲಾಚಿ ಕೇಳ್ತಿದೀನಿ. ನನ್ನನ್ನು ಈತನಿಂದ ಪಾರುಮಾಡು.

ವಿಟ ಹೆದರಬೇಡ. (ಶಕಾರನಿಗೆ) ಈಕೆಯನ್ನು ನಾನು ನಿನ್ನ ವಶಕ್ಕೆ ಕೊಟ್ಟಿದೀನಿ. ಎಚ್ಚರಿಕೆ. ನಾನು ಮತ್ತೆ ಕೇಳಿದಾಗ ನನಗೆ ಒಪ್ಪಿಸಬೇಕು,

ಶಕಾರ ಖಂಡಿತವಾಗಿ.

ವಿಟ (ಸ್ವಲ್ಪ ದೂರ ಹೋಗಿ) ನಾನು ಹೋದಮೇಲೆ ಈ ದುಷ್ಟ ಇವಳನ್ನು ಕೊಂದುಬಿಟ್ಟರೆ! ಆದ್ದರಿಂದ ಮರೆಯಲ್ಲಿ ನಿಂತು ಇವನ ಉದ್ದೇಶ ತಿಳಿಯೋದು ಒಳ್ಳೇದು. (ಮರೆಯಲ್ಲಿ ನಿಲ್ಲುವನು)

ಶಕಾರ (ಸ್ವಗತ) ಇವಳನ್ನು ಕೊಲ್ಲೋದಕ್ಕೆ ಇದೇ ಸಮಯ. ಆದರೆ ಈ ವಿಟ ಮಹಾ ಕುತಂತ್ರಿ. ಇಲ್ಲೇ ಎಲ್ಲಾದರೂ ಹೊಂಚಿ ನೋಡ್ತಾ ಇರಬಹುದು. ಮೊದಲು ಅವನನ್ನು ವಂಚಿಸ್ಬೇಕು. (ಹೂವುಗಳನ್ನು ಕೊಯ್ದು ತೆಗೆದುಕೊಂಡು ಪ್ರಕಾಶವಾಗಿ) ಎಲೆ ಹುಡುಗಿ ವಸಂತಸೇನೆ ಈ ಕಡೆ ಬಾ.

ವಿಟ (ಸ್ವಗತ) ಪರವಾಗಿಲ್ಲ. ಇವನಿಗೆ ಅವಳಲ್ಲಿ ಮೋಹ ಹುಟ್ಟಿದೆ. ಇನ್ನೇನೂ ಭಯವಿಲ್ಲ. ಈಗ ಬಂದಂಬಿಡ್ತೇನೆ. (ಹೊರಟು ಹೋಗುವನು)

ಶಕಾರ ಎಲೆ ಹುಡುಗಿ. ಹೊನ್ನು ಕೊಡ್ತೇನೆ. ಪ್ರೀತಿಯಿಂ ಮಾತಾಡ್ತೇನೆ. ನಿನಗ ಬೇಕಾದದ್ದು ಇನ್ನೂ ಏನಿದೆಯೋ ಕೊಡ್ತೇನೆ. ನಿನ್ನ ಕಾಲಿಗೆ ಬೀಳ್ತೇನೆ. ನನ್ನನ್ನ ಒಪ್ಪಿಕೊ. ಇಷ್ಟು ಬೇಡಿದರೂ ನನ್ನ ಜೊತೆ ಮಾತಾಡೋದಿಲ್ಲವಲ್ಲ. ಯಾಕೆ?

ವಸಂತಸೇನೆ  ಛಿ! ನೀಚ. ಹೊನ್ನಿನ ಆಸೆ ಹುಟ್ಟಿಸಿ ಮೋಸ ಮಾಡೋದಕ್ಕೆ ನೋಡ್ತೀಯಾ? ಇದುವರೆಗೂ ಸೀಮಾವಿನ ಮರ ಸೇವಿಸಿ ಈಗ ಮುಳ್ಳು ಮುತ್ತುಗದ ಬಳಿ ಬಂದೇನೆ?

ಶಕಾರ  ಎಲೆ ತೊತ್ತೆ! ಆ ದರಿದ್ರ ಚಾರುದತ್ತ ಸೀಮಾವಿನ ಮರ; ನಾನು ಮುತ್ತುಗ ಸಹ ಅಲ್ಲ, ಮುಳ್ಳುಮುತ್ತುಗ ಅಲ್ಲವೆ? ಇನ್ನೂ ಅವನಿಗೆ ಹಂಬಲಿಸೋದು, ನನ್ನ ಬಯ್ಯೋದು ಬಿಡೋದಿಲ್ವೊ?

ವಸಂತಸೇನೆ  ಮನಸ್ಸಿನಲ್ಲಿಯೇ ಸದಾ ಇರುವವನನ್ನು ಹೇಗೆ ಹಂಬಲಿಸದೆ ಇರಲಿ?

ಶಕಾರ  ನಿನ್ನನ್ನೂ ಅವನನ್ನೂ ಕೂಡಿಯೇ ಬಲಿ ಹಾಕ್ತೇನೆ. ದರಿದ್ರ ವರ್ತಕನ ಪ್ರೇಯಸಿ!

ವಸಂತಸೇನೆ  ಹೇಳು ಹೇಳು. ಇನ್ನಷ್ಟು ಸಲ ಹಾಗೆ ಹೇಳು. ಆ ಮಾತು ನನಗೆ ದೊಡ್ಡ ಗೌರವ.

ಶಕಾರ  ಏಯ್ ಬಡ್ಡಿ! ಆ ತೊತ್ತಿನ ಮಗನೇ ಈಗ ಬಂದು ನಿನ್ನ ಕಾಪಾಡ್ತಾನೊ?

ವಸಂತಸೇನೆ  ಕಂಡರೆ ಖಂಡಿತ ಕಾಪಾಡ್ತಾನೆ.

ಶಕಾರ  ತಾಳು ತೋರಿಸ್ತೀನಿ ನಿನಗೆ ನನ್ನ ಬಲ ಏನು ಅಂತ. ಭಾರತ ಯುದ್ಧದಲ್ಲಿ ಚಾಣಕ್ಯ ಸೀತೆಯನ್ನು ಕೊಂದ ಹಾಗೆ, ಜಟಾಯು ದ್ರೌಪದಿಯನ್ನು ಮುಗಿಸಿದ ಹಾಗೆ ಈಗಲೇ ನಿನ್ನ ಕಥೆ ಪೂರೈಸಿ ಬಿಡ್ತೇನೆ. (ಹೊಡೆಯುವನು)

ವಸಂತಸೇನೆ  ಅಯ್ಯೋ, ಅಮ್ಮಾ! ಚಾರುದತ್ತ! ಎಲ್ಲಿದೀಯೋ ಬಂದು ಬಿಡಿಸಿಕೊ. ಇಲ್ಲ ನಾನು ಕೂಗೋದಿಲ್ಲ. ಅದು ನನಗೇ ಅಪಮಾನ. ಚಾರುದತ್ತ, ನನ್ನ ಹೃದಯೇಶ್ವರ.

ಶಕಾರ  ಎಲಾ ಇನ್ನೂ ಅವನ ಹೆಸರೇ ಜಪಿಸ್ತೀಯಾ? (ಕತ್ತು ಕಿವುಚುವನು)

(ವಸಂತಸೇನೆ ಮೂರ್ಛೆ ಬೀಳುವಳು)

ಈಗ ನನ್ನ ತಾಯ್ತಂದೆಗಳು ಇದ್ದಿದ್ದರ ನನ್ನ ಶೌರ್ಯವನ್ನು ಎಷ್ಟು ಕೊಂಡಾಡ್ತಿದ್ರೊ? ಹೋಗಲಿ, ಅವರಿಗೇ ಆ ಪುಣ್ಯವಿಲ್ಲ. ಈ ಹಾಳು ವಿಟ ಮುಂದಿಹಂದಿ ಬರೋ ಹೊತ್ತಾಯ್ತು.

ಈ ಸ್ಥಳ ಬಿಟ್ಟು ಬೇರೆ ಕಡೆ ನಿಲ್ಲೋದು ವಾಸಿ. (ಸ್ವಲ್ಪ ದೂರ ಹೋಗಿ ನಿಲ್ಲುವನು)

(ವಿಟ ಮತ್ತು ಸ್ಥಾವರಕ ಬರುವರು)

ವಿಟ  ಅಯ್ಯಾ, ಇಗೋ, ಸ್ಥಾವರಕನನ್ನು ಕರಕೊಂಡು ಬಂದಿದೇನೆ.

ಶಕಾರ  ಒಳ್ಳೇದು ಭಾವ.

ವಿಟ  ವಸಂತಸೇನೆಯನ್ನು ನಿನ್ನ ವಶದಲ್ಲಿ ಬಿಟ್ಟಿದ್ದೆ. ಅವಳೆಲ್ಲಿ?

ಶಕಾರ ಹೋದಳು.

ವಿಟ ಎಲ್ಲಿ ಹೋದಳು ?

ಶಕಾರ ನಿನ್ನ ಹಿಂದೇನೆ.

ವಿಟ ಅವಳು ಆ ಕಡೆ ಬರಲಿಲ್ವಲ್ಲ ?

ಶಕಾರ ನೀನು ಯಾವ ದಿಕ್ಕಿಗೆ ಹೋದೆ ?

ವಿಟ ಪೂರ್ವಕ್ಕೆ.

ಶಕಾರ ಅವಳು ದಕ್ಷಿಣ ದಿಕ್ಕಿಗೆ ಹೋದಳು.

ವಿಟ ನಾನೂ ದಕ್ಷಿಣ ದಿಕ್ಕಿಗೆ ಹೋದೆ.

ಶಕಾರ ಅವಳು ಉತ್ತರ ದಿಕ್ಕಿಗೆ ಹೋದಳು.

ವಿಟ (ಅನುಮಾನದ ಮುಖಭಾವದಿಂದ) ಬಹಳ ಅಸಂಬದ್ಧವಾಗಿ ಮಾತಾಡ್ತಾ ಇದೀಯೆ. ನಿಜ ಹೇಳಿಬಿಡು, ಅವಳನ್ನು ಏನು ಮಾಡಿದೆ ?

ಶಕಾರ ಇಗೋ ನನ್ನ ಕಾಲಿನಿಂದ ನಿನ್ನ ತಲೆ ಮುಟ್ಟಿ ಪ್ರಮಾಣ ಮಾಡ್ತೀನಿ. ಖಂಡಿತ ವಾಗಿಯೂ ಅವಳನ್ನು ಸಾಯಿಸ್ಬಿಟ್ಟೆ.

ವಿಟ (ಗಾಬರಿ ನೋವುಗಳಿಂದ) ಅಯ್ಯಯ್ಯೋ ! ಕೊಂದುಬಿಟ್ಟೆಯಾ ?

ಶಕಾರ ನನ್ನ ಮಾತಿನಲ್ಲಿ ನಂಬಿಕೆ ಇಲ್ಲದಿದ್ರೆ ನೀನೇ ಬಾ. ನನ್ನ ಪರಾಕ್ರಮ ನೋಡು. (ಬಿದ್ದಿರುವ ವಸಂತಸೇನೆಯನ್ನು ತೋರಿಸುವನು)

ವಿಟ ಅಯ್ಯೋ ಕೆಟ್ಟೆ ! ನಾನೇ ಅವಳನ್ನು ಕೊಂದಂತಾಯ್ತು. ಎಂಥ ಮಂದಭಾಗ್ಯ ನಾನು (ಪ್ರಜ್ಞೆ ತಪ್ಪಿ ಕೆಳಗುರುಳುವನು)

ಸ್ಥಾವರಕ (ದುಃಖದಿಂದ ವಿಟನನ್ನು ನೇವರಿಸುತ್ತ) ಆರ್ಯ, ಸಮಾಧಾನ ಮಾಡಿಕೊ. ವಸಂತಸೇನೆಯನ್ನು ಕೊಂದವರು ಬೇರೆ ಯಾರೂ ಅಲ್ಲ; ವಿಚಾರಮಾಡದ್ದೆ ರಥ ತಂದ ನಾನೇ.

ವಿಟ (ಎಚ್ಚೆತ್ತು ಮೇಲೇಳುವನು) ಅಯ್ಯೋ ವಸಂತಸೇನೆ, ನಮ್ಮಿಂದ ನಿನಗೆ ಎಂಥ ಸ್ಥಿತಿ ಬಂತು ! (ಶಕಾರನ ಕಡೆಗೆ ತಿರುಗಿ, ಕೋಪದಿಂದ) ಥೂ. ನೀಚ, ಹೆಂಗಸನ್ನು ಕೊಂದೆ. ಇನ್ನು ನಿನ್ನಲ್ಲಿ ಇರೋದು ಸರಿಯಲ್ಲ, (ಹೊರಡುವನು)

(ಶಕಾರ ಅವನನ್ನು ಹೋಗದಂತೆ ಹಿಡಿದುಕೊಂಡು)

ಶಕಾರ ಎಲಾ ! ವಸಂತಸೇನೆಯನ್ನು ನೀನೇ ಕೊಂದು ಆ ತಪ್ಪನ್ನು ನನ್ನ ತಲೇ ಮೇಲೆ ಹೊರಿಸಿ ತಪ್ಪಿಸಿಕೋತಿದೀಯಾ ?

ವಿಟ ಛಿ ! ನೀಚ, ಹಾಳಾಗಿ ಹೋಗು.

ಶಕಾರ ಅಯ್ಯಾ, ನಿನಗೆ ಬೇಕಾದಷ್ಟು ಹೊನ್ನು, ವರಹ ಕೊಡ್ತೀನಿ. ಶಕಾರ ಹೀಗೆ ಮಾಡಿದ ಅಂತ ಮಾತ್ರ ಯಾರಿಗೂ ಹೇಳಬೇಡ.

ವಿಟ — ಅಯ್ಯಾ, ಮಹಾನುಭಾವ ! ನಿನ್ನ ಹಣ ನಿನ್ನಲ್ಲೇ ಇರಲಿ.

ಸ್ಥಾವರಕ — ರಾಮ ರಾಮ ! ಹಣಕೊಟ್ಟು ತಪ್ಪಿಸಿಕೊಳ್ಳೋ ಹಂಚಿಕೆಯೆ ! (ಶಕಾರ ನಗುವನು)

ವಿಟ — ಅಯ್ಯೋ ! ಪಾಪಿ ! ಆ ಹೊಲಸು ನಗು ನಿಲ್ಲಿಸು. ನಿನ್ನ ಸ್ನೇಹಕ್ಕೆ ನಮಸ್ಕಾರ. ಮುರಿದ ಬಿಲ್ಲನ್ನು ಎಸೆಯೋ ಹಾಗೆ ಗುಣವಿಲ್ಲದ ನಿನ್ನಿಂದ ಈ ಗಳಿಗೆಯಿಂದಲೇ ದೂರವಾಗ್ತೇನೆ.

ಶಕಾರ — ಯಾಕೆ ಇಷ್ಟೊಂದು ಕೋಪ ಭಾವ ? ಬಾ, ಕೊಳಕ್ಕೆ ಹೋಗಿ ಈಜೋಣ.

ವಿಟ — ನಿನ್ನ ಸಹವಾಸದಲ್ಲಿ ಇದ್ದದ್ದರಿಂದ ಜನ ನನ್ನನ್ನು ಕ್ರೂರಿ, ಕೊಲೆಪಾತಕ ಅಂತ ತಿಳೀತಾರೆ. ಸ್ತ್ರೀಹತ್ಯ ಮಾಡಿದ ನಿನ್ನ ಜೊತೇಲಿ ಹೇಗೆ ನಗರಕ್ಕೆ ಬರಲಿ ? ಅಲ್ಲಿನ ಸ್ತ್ರೀಯರಿಗೆ ಹೇಗೆ ಮುಖ ತೋರಿಸಲಿ ? (ಬಿದ್ದಿರುವ ವಸಂತಸೇನೆಯ ಕಡೆ ತಿರುಗಿ) ಅಮ್ಮ, ವಸಂತಸೇನೆ, ಮುಂದಿನ ಜನ್ಮದಲ್ಲಿಯಾದರೂ ನೀನು ಉತ್ತಮಕುಲದಲ್ಲಿ ಹುಟ್ಟೋ ಹಾಗಾಗಲಿ.

ಶಕಾರ — ಎಲೋ, ನನಗೆ ಸೇರಿದ ಈ ಉದ್ಯಾನದಲ್ಲಿ ವಸಂತಸೇನೆಯನ್ನು ಕೊಂದು ಹಾಕಿ, ಈಗ ಎಲ್ಲಿಗೆ ಓಡ್ತೀಯ ? ಬಾ, ನಮ್ಮ ಭಾವ ಪಾಲಕ ಮಹಾರಾಜನ ಮುಂದೆ ತಪ್ಪು ಒಪ್ಪಿಕೊ.

ವಿಟ — ಏನೆಂದೆ ನೀಚ ? (ಕತ್ತಿ ಹಿರಿಯುವನು)

ಶಕಾರ — ಎಲೆಲೆ ! ನಾನಂದ ಮಾತಿಗೆ ಹೆದರಿಕೊಂಡೆಯೊ ಹೇಗೆ ? ಸುಮ್ಮನೆ ಹಾಗಂದೆ ಅಷ್ಟೆ. ಹೋಗು ಹೋಗು.

ವಿಟ — (ಸ್ವಗತ) ನಾನು ಇನ್ನು ಇಲ್ಲಿರೋದು ಸರಿಯಲ್ಲ. ಶರ್ವಿಲಕ, ಚಂದನಕ ಇವರೆಲ್ಲ ಎಲ್ಲಿದ್ದಾರೋ ಅಲ್ಲಿಗೆ ಹೋಗಿ ಅವರನ್ನು ಸೇರಿಕೋತೇನೆ. (ಪ್ರಕಾಶ) ಏ, ದುಷ್ಟ, ಇಗೋ ನಿನ್ನನ್ನು ತಿರಸ್ಕರಿಸಿ ಹೋಗ್ತಿದೀನಿ (ಹೋಗುವನು)

ಶಕಾರ — ಹೋಗು ಹೋಗು. ಹಾಳಾಗಿ ಹೋಗು. (ಸ್ಥಾವರಕನ ಕಡೆ ತಿರುಗಿ) ಎಲೋ ಸ್ಥಾವರಕ, ನಾನು ಮಾಡಿದ್ದು ಹೇಗಿದೆ ?

ಸ್ಥಾವರಕ — ಬಹಳ ಅಯೋಗ್ಯವಾಗಿದೆ.

ಶಕಾರ — ಏನೆಂದೆ ? ನನ್ನ ಕೆಲಸ ಅಯೋಗ್ಯವಾದದ್ದೆ ? ಹಾಗನಬಾರದು. ಇಗೊ, ಈ ಆಭರಣ ತಗೋ. ಇದು ಹಾಕಿಕೊಳ್ಳೋವಾಗ ಮಾತ್ರ ನನ್ನದು. ಉಳಿದ ಹೊತ್ತಿನಲ್ಲಿ ನಿನ್ನದೇ.

ಸ್ಥಾವರಕ — ಇದು ನಿಮಗೆಮಾತ್ರ ಹೊಂದುತ್ತೆ. ನನಗೆ ಬೇಡ.

ಶಕಾರ — ಸರಿ. ರಥ ತಗೊಂಡು ಹೋಗು. ನನ್ನ ಅರಮನೆಯ ಉಪ್ಪರಿಗೇಲಿ ಕೂತಿರು ; ಬರ್ತೇನೆ.

ಸ್ಥಾವರಕ ಆಗಲಿ ಸ್ವಾಮೀ. ಹೋಗ್ತೇನೆ. (ಹೋಗುವನು)

ಶಕಾರ ಆತ್ಮರಕ್ಷಣೆ ಮಾಡಿಕೊಳ್ಳಲು ಭಾವ ಕಣ್ಮರೆಯಾದ. ಈ ಸ್ಥಾವರಕನನ್ನು ಕಾಲಿಗೆ ಬೇಡಿ ಹಾಕಿ ಬಂಧಿಸಿ ಇಡ್ತೇನೆ. ಅಂದಮೇಲೆ ಈ ಗುಟ್ಟು ಹೇಗೆ ರಟ್ಟಾಗುತ್ತೆ ? (ವಸಂತಸೇನೆಯ ಹತ್ತಿರ ಬಂದು ಪರೀಕ್ಷೆ ಮಾಡಿ) ಇವಳು ಸತ್ತಿರೋದು ನಿಶ್ಚಯ. ಈ ಹಚ್ಚಡವನ್ನು ಇವಳ ಮೇಲೆ ಹೊದಿಸ್ತೇನೆ. (ಯೋಚಿಸಿ) ಬೇಡ, ಬೇಡ, ಇದರ ಮೇಲೆ ನನ್ನ ಹೆಸರಿದೆ. ನಾನೇ ಇವಳನ್ನು ಕೊಂದದ್ದಕ್ಕೆ ಇದು ಸಾಕ್ಷಿಯಾಗುತ್ತೆ. ಹ್ಞಾ ! ಈ ತರಗೆಲೆಗಳಿಂದ ಮುಚ್ಚಿ ಬಿಡುತ್ತೇನೆ. (ಹಾಗೆ ಮಾಡಿ) ಇರಲಿ, ಈಗ ನ್ಯಾಯಾಲಯಕ್ಕೆ ಹೋಗಿ ವ್ಯವಹಾರ ಹೂಡ್ತೇನೆ—ಹಣದಾಸೆಯಿಂದ ವರ್ತಕ ಚಾರುದತ್ತ ನನ್ನ ಉದ್ಯಾನದಲ್ಲಿ ವಸಂತಸೇನೆಯನ್ನು ಕೊಂದ ಅಂತ. (ಹೋಗುತ್ತ ಹಿಂದೆ ನೋಡಿ ಭಯದಿಂದ) ಅಯ್ಯಯ್ಯೋ ! ನಾನು ಎಲ್ಲಿಗೆ ಹೋದರೂ ಅಲ್ಲಿಗೆಲ್ಲ ಈ ಭಿಕ್ಷು ಬರ್‍ತಾನಲ್ಲ. ಹಿಂದೆ ಇವನನ್ನು ಶಿಕ್ಷೆಮಾಡಿ ಓಡಿಸಿದ್ದೆ. ನನ್ನ ಮೇಲೆ ಇವನಿಗೆ ವೈರವೂ ಇದೆ. ಎಲ್ಲಾದರೂ ನನ್ನನ್ನು ಕಂಡುಬಿಟ್ಟರೆ ನಾನೇ ಇವಳನ್ನು ಕೊಂದೆ ಅಂತ ಹೇಳಿಯೂ ಬಿಡಬೋದು. ಇರಲಿ, ಈ ಹಾಳು ಗೋಡೆ ಹಾರಿ ಹೊರಟು ಹೋಗ್ತೇನೆ.

(ಭಿಕ್ಷು ಬರುವನು. ಕೆಳಗೆ ಬಿದ್ದಿರುವ ತರಗೆಲೆಗಳ ರಾಶಿಯ ಮೇಲೆ ಬಟ್ಟೆಯನ್ನು ಹರಡಿ 'ನಮೋ ಬುದ್ಧೇಶ' ಎನ್ನುತ್ತ ಪಕ್ಕದಲ್ಲಿ ಕೂರುವನು)

ಭಿಕ್ಷು ಬರಿದೆ ತಲೆ ಬೋಳಿಸಿದರೆ, ಮುಖ ಬೋಳಿಸಿದರೆ ಏನು ಪ್ರಯೋಜನ ? ವಿರಾಗಿಯಾಗಬೇಕಾದರೆ ಮನಸ್ಸು ಬೋಳಾಗಬೇಕು. ಆಗಲೇ ಉಳಿದದ್ದಕ್ಕೆ ಅರ್ಥ. ನನಗೋ ಒಂದು ಋಣಭಾರ ಮನಸ್ಸನ್ನು ಕಾಡ್ತಾ ಇದೆ—ಹಿಂದೆ ಆ ಜೂಜುಗಾರರಿಗೆ ತನ್ನ ಕೈಕಡಗ ಕೊಟ್ಟು ನನ್ನನ್ನು ಬಿಡಿಸಿದ ವಸಂತಸೇನೆಗೆ ನಾನು ಯಾವ ಪ್ರತ್ಯುಪಕಾರವನ್ನೂ ಮಾಡೋದಕ್ಕೆ ಆಗಿಲ್ಲ ಅಂತ. ಅದೊಂದಾದರೆ ಅಲ್ಲಿಗೆ ನಾನು ಋಣಮುಕ್ತ. (ತರಗಿನ ಸದ್ದು ಆಲಿಸಿ) ಇದೇನು! ಈ ತರಗಿನೊಳಗೆ ಏನೋ ಉಸಿರಾಡೋ ಹಾಗೆ ಕಾಣುತ್ತೆ. (ಯೋಚಿಸಿ) ಒಣಗಿದ ತರಗಿನ ಮೇಲೆ ಒದ್ದೆ ಬಟ್ಟೆ ಹಾಕಿರೋದರಿಂದ ಹೀಗೆ ಶಬ್ದವಾಗ್ತಿದೆಯೋ ಏನೊ. (ವಸಂತಸೇನೆಯು ಒಂದು ಕೈ ಹೊರಕ್ಕೆ ಚಾಚುವುದು) ಇದೇನಿದು ! ಅಲಂಕರಿಸಿಕೊಂಡಿರೋ ಹೆಣ್ಣಿನ ಕೈ ! (ವಸಂತಸೇನೆಯು ಇನ್ನೊಂದು ಕೈ ಹೊರಬರುವುದು) ಇದೇನು ! ಇನ್ನೂ ಒಂದು ಕೈ ಕಾಣ್ತಿದೆ. (ಚೆನ್ನಾಗಿ ನೋಡಿ) ಈ ಕೈಯನ್ನು ಹಿಂದೆ ಎಲ್ಲೋ ನೋಡಿದ ಹಾಗಿದೆಯಲ್ಲ ! (ಗಮನಿಸಿ) ಆಹಾ ತಿಳೀತು ಜೂಜುಗಾರ ನನ್ನನ್ನು ಹಿಡಿದಿದ್ದಾಗ ಹೆದರಬೇಡ ಅಂತ ಅಭಯ ಕೊಟ್ಟ ಕೈಯೇ ಇದು. (ತರಗನ್ನು ತೆಗೆದು ನೋಡಿ) ಅಯ್ಯೋ ! ಹೌದು. ಇವಳು ವಸಂತಸೇನೆಯೇ.

(ವಸಂತಸೇನೆ ನೀರು ಬೇಕೆಂದು ಸನ್ನೆಮಾಡುವಳು)

ಭಿಕ್ಷು ಓ! ನೀರು ಕೇಳ್ತಿದಾಳಲ್ಲ! ಕೊಳ ದೂರದಲ್ಲಿದೆ. ಏನು ಮಾಡಲಿ? ಈ ಒದ್ದೆ ಬಟ್ಟೆಯನ್ನೇ ಬಾಯಿಗೆ ಹಿಂಡ್ತೇನೆ.

(ಬಟ್ಟೆಯನ್ನು ಹಿಂಡುವನು. ವಸಂತಸೇನೆ ಚೇತರಿಸಿಕೊಂಡು ಏಳುವಳು. ಭಿಕ್ಷು ಬಟ್ಟೆಯಿಂದ ಗಾಳಿ ಹಾಕುವನು)

ವಸಂತಸೇನೆ ನೀನು ಯಾರಪ್ಪ?

ಭಿಕ್ಷು ಮರೆತಿರಾ ತಾಯಿ? ನಿಮ್ಮ ಹಸ್ತಾಭರಣ ಕೊಟ್ಟು ಜೂಜುಗಾರರಿಂದ ನನ್ನನ್ನು ಬಿಡಿಸಲಿಲ್ವೆ?

ವಸಂತಸೇನೆ ಓಹೋ! ಹೌದು ನೆನಪಾಯ್ತು.

ಭಿಕ್ಷು ಇದೇನಮ್ಮ ನಿಮಗೆ ಈ ಸ್ಥಿತಿ?

ವಸಂತಸೇನೆ ಸೂಳೆಯಾದೋಳಿಗೆ ಆಗತಕ್ಕ ಗತಿ?

ಭಿಕ್ಷು ನಿಧಾನವಾಗಿ ಮೇಲೆ ಏಳಮ್ಮ. (ವಸಂತಸೇನೆ ಏಳುವಳು) ಈ ಆಶ್ರಮದಲ್ಲಿ ನನ್ನ ತಂಗಿ ಇದಾಳೆ. ನೀವು ಅಲ್ಲಿ ಸ್ವಲ್ಪ ಸಂಧಾರಿಸಿಕೊಳ್ಳೋರಂತೆ. ಮೆಲ್ಲಗ ಬನ್ನಿ. (ಹೋಗುವರು)

* * * *

## ಒಂಬತ್ತನೆಯ ಅಂಕ

**(ಸ್ಥಾನ—ನ್ಯಾಯಾಲಯ ಪ್ರವೇಶ—ಶೋಧನಕ)**

ಶೋಧನಕ ನ್ಯಾಯಾಲಯಕ್ಕೆ ಹೋಗಿ ಆಸನಗಳನ್ನೆಲ್ಲ ಸಿದ್ಧಮಾಡು ಅಂತ ನ್ಯಾಯಾಧೀಶರು ಆಜ್ಞೆ ಮಾಡಿದ್ದಾರೆ. ಬೇಗ ಹೋಗಿ ಸಿದ್ಧಮಾಡ್ತೀನಿ. (ಓಡಿಯಾಡುತ್ತ ಆಸನಗಳನ್ನು ಇಟ್ಟು) ಎಲ್ಲ ಸಿದ್ಧವಾಯ್ತು. ಹೋಗಿ ಅಧಿಕಾರಿಗಳಿಗೆ ತಿಳಿಸ್ತೇನೆ. (ಹೋಗುವನು)

(ಚೆನ್ನಾಗಿ ಉಡುಪು ಧರಿಸಿದ ಶಕಾರನ ಪ್ರವೇಶ)

ಶಕಾರ ವಿಷಲತೆಯ ಗಂಟಿನೊಳಗೆ ಸಿಕ್ಕಿಕೊಂಡ ಕೀಟದ ಹಾಗೆ ಹೊರ ಹೋಗೋ ದಾರಿ ಯಾವುದು ಅಂತ ಹುಡುಕ್ತಿದ್ದೆ. ಈಗ ಒಂದು ದೊಡ್ಡ ದಾರಿಯೇ ಸಿಕ್ತು. ಆ ಚಾರುದತ್ತನ ತಲೆಗೆ ಈ ಕೊಲೆ ಗಂಟು ಹಾಕ್ತೀನೆ. ಹೇಗೂ ಅವನು ದರಿದ್ರ. ಏನು ಅಪಾದನೆ ಮಾಡಿಯೂ ಜೀರ್ಣಿಸಿಕೋಬಹುದು. ಇರಲಿ ಅಧಿಕಾರಿಗಳು ಬರೋವರೆಗೂ ಕಾದು ಮೊದಲು ದೂರು ಬರೆಸ್ತೇನೆ. ಅಲ್ಲಿವರೆಗೂ ಇಲ್ಲೇ ಹುಲ್ಲಿನ ಮೇಲೆ ಕೂತಿರ್ತೀನಿ. (ದೂರದಲ್ಲಿ ಕೆಳಗೆ ಕೂರುವನು)

**ಶೋಧನಕ** (ಇನ್ನೊಂದು ಕಡೆಯಿಂದ ಬಂದು) ಓಹೋ ! ಅಧಿಕಾರಿಗಳು ಬರ್‍ತಿದಾರೆ.

(ನ್ಯಾಯಾಧೀಶನು ಲೇಖಕ ಮೊದಲಾದವರೊಡನೆ ಬರುವನು)

**ನ್ಯಾಯಾಧೀಶ** ಶೋಧನಕ ಹೊರಗೆ ಹೋಗಿ, ನ್ಯಾಯ ಬಯಸಿ ಬಂದವರು ಯಾರಾದರೂ ಇದಾರೆಯೋ ಅಂತ ತಿಳಿದು ಬಾ.

**ಶೋಧನಕ** ಅಪ್ಪಣೆ ಸ್ವಾಮಿ (ಶಕಾರ ಕುಳಿತಿರುವ ಭಾಗಕ್ಕೆ ಬಂದು) ಅಯ್ಯಾ, ನ್ಯಾಯ ಬಯಸಿ ಬಂದಿರೋದು ಯಾರು ?

**ಶಕಾರ** ಅಯ್ಯಾ ನಾನು, ಮನುಷ್ಯ. ದೊಡ್ಡ ಮನುಷ್ಯ, ರಾಜನ ಭಾವಮೈದುನ, ನ್ಯಾಯ ಅಪೇಕ್ಷಿಸಿ ಬಂದಿದೇನೆ.

**ಶೋಧನಕ** (ಸ್ವಗತ) ಶುರುವಾಗ್ತ ಇದ್ದ ಹಾಗೇನೇ ಈ ನೀಚ ವಕ್ರಿಸಿದನಲ್ಲಪ್ಪ ! (ಪ್ರಕಾಶ) ತಾಳಿ ಸ್ವಾಮಿ, ನ್ಯಾಯಾಧೀಶರಿಗೆ ತಿಳಿಸ್ತೇನೆ. (ನ್ಯಾಯಾಧೀಶರ ಬಳಿಗೆ ಬಂದು) ಸ್ವಾಮಿ, ದೊರೆಯ ಭಾವಮೈದ ಬಂದಿದಾರೆ.

**ನ್ಯಾಯಾಧೀಶ** ಏನು ? ದೊರೆಯ ಸಂಬಂಧಿ ಕಾರ್ಯಾರ್ಥಿಯಾಗಿ ಬಂದಿದಾನೆಯೆ ? ಸೂರ್ಯೋದಯದಲ್ಲೇ ಗ್ರಹಣ ಹಿಡಿದ ಹಾಗೆ ಆರಂಭದಲ್ಲೇ ಈತನ ವ್ಯವಹಾರ ಬಂತೆ ? ಇವತ್ತಿನ ಕೆಲಸವೆಲ್ಲ ಹಾಳಾದ ಹಾಗೆಯೆ ! ಶೋಧನಕ, ಹೋಗಿ ಹೇಳು : ‘ ಈ ದಿನ ಬೇರೆ ವ್ಯವಹಾರಗಳು ಇರುವುದರಿಂದ ನಿನ್ನದನ್ನು ನಾಳೆ ವಿಚಾರಿಸ್ತಾರೆ ’ ಅಂತ.

**ಶೋಧನಕ** ಅಪ್ಪಣೆ (ಶಕಾರನ ಬಳಿಗೆ ಬಂದು) ಸ್ವಾಮೀ ಇವತ್ತು ನಿಮ್ಮ ವ್ಯವಹಾರಕ್ಕೆ ಸಮಯ ಇಲ್ಲ. ನಾಳೆ ಬನ್ನಿ ಅಂತ ನ್ಯಾಯಾಧೀಶರು ತಿಳಿಸಿದಾರೆ.

**ಶಕಾರ** (ಕೋಪದಿಂದ) ಏನು ಇವತ್ತು ನನ್ನ ಕೆಲಸಕ್ಕೆ ಹೊತ್ತಿಲ್ಲವ ? ಆಗಲಿ ನೋಡ್ತೇನೆ. ರಾಜ ನನ್ನ ಭಾವ ತಿಳೀತೊ ? ಅವನಿಗೆ, ಅಮ್ಮನಿಗೆ, ಅಕ್ಕನಿಗೆ ಹೇಳಿಕೊಟ್ಟು ಈ ನ್ಯಾಯಾಧೀಶನನ್ನ ತೆಗೆಸಿ ಮತ್ತೊಬ್ಬನನ್ನು ಈ ಜಾಗಕ್ಕೆ ತರ್‍ತೇನೆ. ಅಷ್ಟು ಮಾಡದೆ ಹೋದರೆ ನಾನು ಶಕಾರನೇ ? (ಮೀಸೆ ತಿರುವುತ್ತ ಹೊರಡುತ್ತಿರುವನು)

**ಶೋಧನಕ** ಸ್ವಾಮೀ, ರಾಜ್ಯಶ್ಯಾಲರೆ, ಸ್ವಲ್ಪ ತಾಳಿ, ಅಧಿಕಾರಿಗಳಿಗೆ ನಿಮ್ಮ ಮಾತು ತಿಳಿಸಿ ಬರ್‍ತೇನೆ. (ನ್ಯಾಯಾಧೀಶನ ಬಳಿಗೆ ಬಂದು) ಸ್ವಾಮಿ, ಆತ ನಿಮ್ಮ ಮಾತಿಗೆ ಕೋಪಿಸಿಕೊಂಡು ಹೀಗೆ ಹೇಳಿದರು.

(ನ್ಯಾಯಾಧೀಶನಿಗೆ ತೀರ ಹತ್ತಿರ ನಿಂತು ಗುಟ್ಟಾಗಿ ಹೇಳುವನು)

**ನ್ಯಾಯಾಧೀಶ** ಆ ಮೂರ್ಖ ಏನು ಬೇಕಾದರೂ ಮಾಡಿಯಾನು. ಇವತ್ತೇ ನಿನ್ನ ವ್ಯವಹಾರದ ತೀರ್ಮಾನ ಆಗುತ್ತೆ, ಹೋಗಬೇಡ ಅಂತ ಹೇಳು.

ಶೋಧನಕ (ಶಕಾರನ ಹತ್ತಿರಕ್ಕೆ ಬಂದು) ಸ್ವಾಮೀ, ನಿಮ್ಮ ವ್ಯವಹಾರ ಈ ಹೊತ್ತೇ ನಡೆಯುತ್ತಂತೆ, ಒಳಗೆ ಬನ್ನಿ.

ಶಕಾರ ಮೊದಲು ಇವತ್ತು ಸಾಧ್ಯವಿಲ್ಲ ಅಂದವರೇ ಈಗ ಸಾಧ್ಯ ಅನ್ನಿದಾರೆ. ಭಲೆ! ನ್ಯಾಯಾಧೀಶನಿಗೂ ನನ್ನ ವಿಷಯದಲ್ಲಿ ಭಯ ಇದೆ ಅಂತ ಆಯ್ತು. ಇರಲಿ. (ನ್ಯಾಯಾಧೀಶನ ಬಳಿಗೆ ಬಂದು) ಅಯ್ಯಾ, ನಾನು ಕ್ಷೇಮ ನೀವೂ ಕ್ಷೇಮವಾಗಿರುವಂತೆ ಮಾಡ್ತೀನೆ.... ಇಲ್ಲ ಇಲ್ಲ...ಮಾಡೋದಿಲ್ಲ.

ನ್ಯಾಯಾಧೀಶ (ಸ್ವಗತ) ಇವನ ಸಂಸ್ಕಾರ ಇವನ ಮಾತಿನಲ್ಲೇ ಚೆನ್ನಾಗಿ ಗೊತ್ತಾಗುತ್ತೆ. (ಪ್ರಕಾಶ) ಅಲ್ಲಿ ಕುಳಿತುಕೊಳ್ಳಿ.

ಶಕಾರ (ನಕ್ಕು) ಈ ನ್ಯಾಯಾಲಯಂ ನಮ್ಮ ಭಾವನದು ಸ್ವಾಮೀ. ನನಗೆ ಎಲ್ಲಿ ಇಷ್ಟವೋ ಅಲ್ಲಿ ಕೂರ್ತೀನೆ. (ನ್ಯಾಯಾಧೀಶನ ತಲೆಯ ಮೇಲೆ ಕೈಯಿಟ್ಟು) ಇಗೋ ಇಲ್ಲಿ ಕುಳಿತೆ. (ನೆಲದ ಮೇಲೆ ಕೂರುವನು)

ನ್ಯಾಯಾಧೀಶ ನಿಮ್ಮ ವ್ಯವಹಾರ ಏನು ?

ಶಕಾರ ನಾನು ದೊಡ್ಡ ಕೊಳದಪ್ಪಲೆಯಂಥ ಭಾರಿ ಕುಲದಲ್ಲಿ ಹುಟ್ಟಿದವನು. ನಮ್ಮಪ್ಪ ದೊರೆಗೆ ಮಾವ. ದೊರೆ ನಮ್ಮಪ್ಪನ ಅಳಿಯ. ನಾನು ದೊರೆಗೆ ಭಾವಮೈದ. ದೊರೆ ನಮ್ಮಕ್ಕನ ಗಂಡ. ಗೊತ್ತಿದೆ ತಾನೆ ?

ನ್ಯಾಯಾಧೀಶ ಎಲ್ಲ ಗೊತ್ತಿದೆ, ಆದರೆ ನಿಮ್ಮ ಸಂಬಂಧ ಕುಲಗಳ ವಿಚಾರ ಇಲ್ಲಿ ಬೇಕಿಲ್ಲ. ನೀವು ಬಂದ ಕೆಲಸ ಏನು ಅಂತ ಹೇಳಿ.

ಶಕಾರ ಹೇಳ್ತೀನೆ, ಕೇಳಿ. ಒಂದು ವೇಳೆ ನಾನು ಅಪರಾಧಿಯೇ ಆದರೂ ನಮ್ಮ ಭಾವ ನನ್ನನ್ನು ದಂಡಿಸೋದಿಲ್ಲ, ತಿಳೀತೆ ? ಅವನು ನನ್ನ ಮೇಲಿನ ಪ್ರೀತಿಯಿಂದ ಶ್ರೇಷ್ಠವಾದ ಪುಷ್ಪಕರಂಡಕಜೀರ್ಣೋದ್ಯಾನವನ್ನು ನನಗೆ ವಿಹಾರಕ್ಕೆ ಅಂತ ಕೊಟ್ಟಿದಾನೆ. ನಾನು ಮರ ಕಡಿಸೋದಕ್ಕೂ, ಒಣಗಿಸೋ ದಕ್ಕೂ ದಿನಾ ಅಲ್ಲಿಗೆ ಹೋಗೋದುಂಟು. ನಿನ್ನೆ ಹಾಗೆ ಹೋಗಿದ್ದಾಗ ಸತ್ತಹೆಂಗಸಿನ ಒಂದಂ ಶರೀರ ಅಲ್ಲಿ ಬಿದ್ದಿತ್ತು. ನಾನು ಅದನ್ನು ನೋಡಿದೆ... ಇಲ್ಲ ಇಲ್ಲ, ನೋಡಲಿಲ್ಲ.

ನ್ಯಾಯಾಧೀಶ ಅಲ್ಲಿ ಸತ್ತು ಬಿದ್ದಿದ್ದ ಹೆಂಗಸು ಯಾರು ಗೊತ್ತೆ ?

ಶಕಾರ ಅಷ್ಟು ತಿಳೀದೆ ನನಗೆ ? ಬೇಕಾದಷ್ಟು ಚಿನ್ನದ ಒಡವೆ ಹಾಕಿಕೊಂಡು ಈ ನಗರಕ್ಕೇ ಶೃಂಗಾರವಾಗಿದ್ದ ವಸಂತಸೇನೆ ಅವಳು. ಯಾರೋ ದುಷ್ಟ ಒಡವೆ ಆಸೆಯಿಂದ ನಿರ್ಜನವಾದ ನಮ್ಮ ಉದ್ಯಾನದಲ್ಲಿ ಅವಳನ್ನು ಕತ್ತು ಹಿಸುಕಿ ಕೊಲೆ ಮಾಡಿದಾನೆ....ನಾನಲ್ಲ...(ತಪ್ಪಿತು ಎಂಬಂತೆ ಬಾಯಿ ಮುಚ್ಚಿ ಕೊಳ್ಳುವನು)

ನ್ಯಾಯಾಧೀಶ (ಸ್ವಗತ) ನಗರ ರಕ್ಷಕರ ಪ್ರಮಾದ ಎಂಥದು! (ಲೇಖಕನನ್ನು ಕುರಿತು) ಕರಣಿಕರೆ, 'ನಾನಲ್ಲ' ಅಂತ ಇವರು ಹೇಳಿದ ಮಾತನ್ನು ಮೊದಲು ಗುರುತುಮಾಡಿಕೊಳ್ಳಿ.

ಲೇಖಕ ಅಪ್ಪಣೆ ಸ್ವಾಮಿ. (ಬರೆದುಕೊಳ್ಳುವನು)

ಶಕಾರ (ಸ್ವಗತ) ಅಯ್ಯಯ್ಯೊ! ಅವಸರದಲ್ಲಿ ಕುದಿಯೋ ಪಾಯಸ ನುಂಗಿದವರ ಹಾಗೆ ಆಯ್ತು. ನನ್ನ ಬುಡಕ್ಕೆ ನಾನೇ ತಂದುಕೊಂಡೆನಲ್ಲ! ಇರಲಿ, ಮಾಡ್ತೇನೆ (ಪ್ರಕಾಶ) ಅಯ್ಯಾ ನ್ಯಾಯಾಧೀಶರೆ, ನಾನಲ್ಲ ಅಂತ ಯಾಕೆ ಹೇಳಲಿ? ಬರೆದುಕೊಳ್ಳಿ. ನಾನೇ ಕಂಡೆ. ಏನೀಗ? ತಾವು ಯಾಕೋ ಬಹಳ ಗದ್ದಲ ಮಾಡ್ತಿರೋ ಹಾಗಿದೆಯಲ್ಲ?

ನ್ಯಾಯಾಧೀಶ ಅವಳನ್ನು ಕೊಂದವರು ಒಡವೆಗಾಗಿ ಕೊಂದರು; ಕೈಯಿಂದ ಅವಳ ಕೊರಳು ಹಿಸುಕಿಯೇ ಕೊಂದರು ಅಂತ ನಿಮಗೆ ಹೇಗೆ ತಿಳೀತು?

ಶಕಾರ ಅವಳ ಕೊರಳು ಊದಿತ್ತು. ಮೈಯಲ್ಲಿ ಒಂದೂ ಒಡವೆ ಇರಲಿಲ್ಲ. ಆದ್ದರಿಂದ ಊಹೆ ಮಾಡಿ ಹೇಳಿದೆ.

ಲೇಖಕ ಇರಬಹುದು.

ಶಕಾರ (ಸ್ವಗತ) ಸದ್ಯ, ನನ್ನ ಅದೃಷ್ಟ. ಬಚಾಯಿಸಿಕೊಂಡೆ.

ನ್ಯಾಯಾಧೀಶ ಈ ವ್ಯವಹಾರದಲ್ಲಿ ವಸಂತಸೇನೆಯ ತಾಯಿಯ ಹೇಳಿಕೆ ತುಂಬ ಮುಖ್ಯ. ಶೋಧನಕ, ಹೋಗಿ ಆಕೆಯನ್ನು ಕರಕೊಂಡು ಬಾ.

ಶೋಧನಕ (ಹೋಗಿ, ವಸಂತಸೇನೆಯ ತಾಯಿಯ ಜೊತೆ ಬರುತ್ತ) ಇಗೋ ಸ್ವಾಮಿ, ಅವರೇ ಬಂದರು.

ಮುದುಕಿ ಮಹಾಶಯರೆ, ತಮಗೆಲ್ಲ ಸುಖವಾಗಲಿ.

ನ್ಯಾಯಾಧೀಶ ಬನ್ನಿ ತಾಯಿ, ಅಲ್ಲಿ ಕುಳಿತುಕೊಳ್ಳಿ.

ಮುದುಕಿ ಅಪ್ಪಣೆ ಸ್ವಾಮಿ. (ಕುಳಿತುಕೊಳ್ಳುವಳು)

ಶಕಾರ (ಆಕ್ಷೇಪಣೆಯ ದನಿಯಲ್ಲಿ) ಏನೇ, ಮುದಿಸೂಳೆ, ನೀನೂ ಬಂದುಬಿಟ್ಟೆಯೊ?

ನ್ಯಾಯಾಧೀಶ ವಸಂತಸೇನೆಯ ತಾಯಿ ನೀವೇ ಏನಮ್ಮ?

ಮುದುಕಿ ಹೌದು, ಸ್ವಾಮಿ.

ನ್ಯಾಯಾಧೀಶ ನಿಮ್ಮ ಮಗಳು ಎಲ್ಲಿಗೆ ಹೋಗಿದಾಳೆ?

ಮುದುಕಿ ತನ್ನ ಗೆಳೆಯನ ಮನೆಗೆ.

ನ್ಯಾಯಾಧೀಶ ಆತನ ಹೆಸರೇನಮ್ಮ?

ಮುದುಕಿ (ಸ್ವಗತ) ಅಯ್ಯೋ! ಇದು ನಾಚಿಕೆಗೇಡಾಯ್ತಲ್ಲ! (ಪ್ರಕಾಶ) ಈ ಸುದ್ದಿ ಬೇರೆ ಜನರು ಕೇಳುವಂಥದು, ಇಲ್ಲಿ ಅದು ಅಗತ್ಯವೇ?

**ನ್ಯಾಯಾಧೀಶ** ನಾಚಬೇಡಮ್ಮ. ನ್ಯಾಯಾಲಯದಲ್ಲಿ ವ್ಯವಹಾರವಿದ್ದಾಗ ಇದನ್ನೆಲ್ಲ ಕೇಳಲೇಬೇಕಾಗುತ್ತೆ.

**ಮುದುಕಿ** ಸರಿ, ಹೇಳ್ತೀನಿ. ಅವನು ವರ್ತಕ ವಿನಯದತ್ತನ ಮೊಮ್ಮಗ. ಸಾಗರದತ್ತನ ಮಗ. ಸದ್ಗುಣಿಯಾದ ಚಾರುದತ್ತ.

**ಶಕಾರ** ಕೇಳಿದಿರಿ ತಾನೆ? ಈ ಮಾತನ್ನೆಲ್ಲ ಹಾಗೆ ಹಾಗೇ ಬರೆದುಕೊಳ್ಳಿ. ಆ ಚಾರುದತ್ತನ ಮೇಲೇ ನನ್ನ ಆರೋಪ ಇರೋದು.

**ಲೇಖಕ** ಚಾರುದತ್ತ ಮಗಳ ಗೆಳೆಯ ಅನ್ನೋದರಲ್ಲಿ ದೋಷವೇನೂ ಇಲ್ಲವಲ್ಲ?

**ನ್ಯಾಯಾಧೀಶ** ಈಗ ಚಾರುದತ್ತನೇ ಪ್ರತಿವಾದಿ. ಅವನನ್ನು ಕರೆಸಬೇಕು. ಅಯ್ಯಾ ಕರಣಿಕರೆ. ವಸಂತಸೇನೆ ಚಾರುದತ್ತನ ಮನೆಗೆ ಹೋದಳು ಎನ್ನುವುದನ್ನು ಬರೆದುಕೊಳ್ಳಿ, ಇದು ಈ ವ್ಯವಹಾರದಲ್ಲಿ ಮುಖ್ಯವಾದ ಅಂಶ. (ಕ್ಷಣ ತಡೆದು) ಎಂಥ ವಿಚಿತ್ರ ಇದು? ಚಾರುದತ್ತನಂಥ ಸದ್ಗುಣಿಯನ್ನೂ ಇಲ್ಲಿಗೆ ಕರೆಸಬೇಕಾಯ್ತು. ಏನು ಮಾಡೋದು? ವ್ಯವಹಾರವೇ ಹಾಗಿದೆ. ಅಯ್ಯಾ, ಶೋಧನಕ. ಹೋಗು. ಬೇಸರಪಡಿಸುವ, ಗಾಬರಿಪಡಿಸುವ ಯಾವ ಮಾತನ್ನೂ ಆಡದೆ ಚಾರುದತ್ತನನ್ನು ಇಲ್ಲಿಗೆ ಕರಕೊಂಡು ಬಾ.

**ಶೋಧನಕ** ಅಪ್ಪಣೆ ಸ್ವಾಮೀ. (ಹೋಗುವನು)

(ಸ್ಥಾನ—ಬೀದಿ)

(ಚಾರುದತ್ತ ಶೋಧನಕನೊಡನೆ ಪ್ರವೇಶಿಸುವನು)

**ಚಾರುದತ್ತ** (ಚಿಂತಿಸುತ್ತ) ರಾಜನಿಗೆ ನನ್ನ ಕುಲಶೀಲಗಳೆಲ್ಲ ಚೆನ್ನಾಗಿ ಗೊತ್ತು. ಆದರೂ ನನ್ನನ್ನು ನ್ಯಾಯಾಲಯಕ್ಕೆ ಕರೆಸೋ ಕಾರಣ ಏನು? ನನಗೆ ಏನೋ ಕೇಡು ಒದಗಲಿದೆ ಅಂತ ಅನ್ನಿಸುತ್ತೆ. ನಾನು ಆರ್ಯಕನ ಸಂಕಲೆ ತೆಗೆಸಿ ಅವನನ್ನು ರಥದಲ್ಲಿ ಕಳಿಸಿಕೊಟ್ಟದ್ದು ಏನಾದರೂ ರಾಜನಿಗೆ ತಿಳಿಯಿತೊ? ಇರಲಿ, ಸುಮ್ಮನೆ ಯೋಚಿಸೋದು ಯಾಕೆ? ನ್ಯಾಯಮಂಟಪಕ್ಕೆ ಹೋಗಿ ನೋಡ್ತೇನೆ. ಅಯ್ಯಾ, ಶೋಧನಕ. ನಡೆ ಹೋಗೋಣ.

**ಶೋಧನಕ** ಹೀಗೆ ಬರಬೇಕು ಸ್ವಾಮಿ.

**ಚಾರುದತ್ತ** (ಒಳಗೆ ಬರುತ್ತಿರುವಾಗ ಬಾಗಿಲಿಗೆ ತಲೆ ತಗಲುವುದು) ದೇವರು ಒಳ್ಳೆಯದನ್ನು ಮಾಡಲಿ.

**ನ್ಯಾಯಾಧೀಶ** (ಜನಾಂತಿಕ) ಓಹೋ! ಚಾರುದತ್ತ ಬಂದ. ಎಂಥ ಸ್ಫುರದ್ರೂಪಿ! ಇವನ ರೂಪ, ತೇಜಸ್ಸು ನೋಡಿದರೆ ಇವನ ಮೇಲೆ ಆರೋಪಿಸಿರೋ ಅಕಾರ್ಯವನ್ನು ಈತ ಖಂಡಿತ ಮಾಡಿಲ್ಲ ಅನ್ನಿಸುತ್ತೆ.

**ಚಾರುದತ್ತ** ಸ್ವಾಮೀ, ನ್ಯಾಯಾಧೀಶರೆ, ಕ್ಷೇಮವೆ?

ನ್ಯಾಯಾಧೀಶ ತಾವು ಕುಶಲವಷ್ಟೆ? ಇಗೋ, ಈ ಪೀಠದಲ್ಲಿ ಕುಳಿತುಕೊಳ್ಳಿ. (ಚಾರುದತ್ತ ಪೀಠದಲ್ಲಿ ಕುಳಿತುಕೊಳ್ಳುವನು)

ಶಕಾರ (ಸಿಟ್ಟಿನಿಂದ) ಬಂದೆಯೇನೋ, ಸ್ತ್ರೀಘಾತಕ? ಅಯ್ಯಾ, ನ್ಯಾಯಾಧಿಪತಿಗಳೆ! ಹೆಂಗಸನ್ನು ಕೊಂದ ಪಾಪಿಗೆ ಆಸನ ಕೊಡ್ತಿದೀರಲ್ಲಾ? ಇದು ತಕ್ಕದ್ದೊ? ನ್ಯಾಯಾಲಯದ ವ್ಯವಹಾರಕ್ಕೆ ಹೇಳಿಸಿದ್ದೊ? (ಅಹಂಕಾರದ ದನಿಯಲ್ಲಿ) ಆಗಲಿ, ಕೊಡಿ.

ನ್ಯಾಯಾಧೀಶ ಚಾರುದತ್ತರೆ, ನಿಮಗೆ ಈಕೆಯ ಮಗಳ ಜೊತೆ ಪ್ರೀತಿ, ಸಂಬಂಧ ಉಂಟೆ?

ಚಾರುದತ್ತ ಯಾರ ಮಗಳ ಜೊತೆ?

ನ್ಯಾಯಾಧೀಶ ಇಗೋ, ಈಕೆಯ ಮಗಳ ಜೊತೆ. (ಮುದುಕಿಯನ್ನು ತೋರಿಸುವನು)

ಚಾರುದತ್ತ (ಎದ್ದು) ಪೂಜ್ಯೆಗೆ ನಮಸ್ಕಾರ.

ಮುದುಕಿ ಮಗೂ ನಿನಗೆ ಒಳ್ಳೆಯದಾಗಲಿ.

ನ್ಯಾಯಾಧೀಶ ಚಾರುದತ್ತ, ಈ ಗಣಿಕೆಯ ಮಗಳು ನಿಮ್ಮ ಗೆಳತಿಯೇನು?

(ಚಾರುದತ್ತ ನಾಚಿಕೊಳ್ಳುವನು)

ಶಕಾರ ನ್ಯಾಯಾಧಿಪತಿಗಳೆ, ನೋಡಿದಿರೊ? ಒಡವೆಯ ಆಸೆಯಿಂದ ವಸಂತಸೇನೆಯನ್ನು ತಾನೇ ಕೊಂದು, ಈಗ ನಾಚಿಕೆಯ ನೆಪದಲ್ಲಿ ತನ್ನ ಕೆಲಸ ಮರೆಸೋದಕ್ಕೆ ಪ್ರಯತ್ನ ಮಾಡ್ತಿದಾನೆ.

ಲೇಖಕ ಹೇಳಿ, ನಾಚಿಕೆಪಡಬೇಡಿ. ಇದು ವ್ಯವಹಾರವಲ್ಲವೆ?

ಚಾರುದತ್ತ (ನಾಚಿಕೆಯಿಂದಲೇ) ಅಧಿಕಾರಿಗಳೆ, ಗಣಿಕೆ ನನ್ನ ಸ್ನೇಹಿತೆಯೆಂದು ಹೇಗೆ ಬಾಯಿಬಿಟ್ಟು ಹೇಳಲಿ? ಏನೋ ಪ್ರಾಯ ಕೆಟ್ಟದ್ದು, ಅಷ್ಟರಿಂದಲೇ ನಡತೆಗೆ ಕುಂದಿಲ್ಲ ತಾನೆ?

ನ್ಯಾಯಾಧೀಶ ಸ್ಪಷ್ಟವಾಗಿ ಹೇಳಿ. ನಾಚಿಕೆಗೆ ಸಂದರ್ಭವಲ್ಲ. ಇದು ವ್ಯವಹಾರವಲ್ಲವೆ?

ಚಾರುದತ್ತ ಏನು, ವ್ಯವಹಾರವೆ? ಯಾರ ಜೊತೆ?

ಶಕಾರ (ಆಟೋಪದಿಂದ) ನನ್ನ ಜೊತೆ!

ಚಾರುದತ್ತ ನಿನ್ನ ಜೊತೆಗೆ ವ್ಯವಹಾರವೆಂದರೆ ಬಹಳ ಕಷ್ಟ.

ಶಕಾರ ಲೋ ಸ್ತ್ರೀಘಾತಕಿ, ಅಮೂಲ್ಯವಾದ ಒಡವೆ ಧರಿಸಿದ್ದ ವಸಂತಸೇನೆಯನ್ನು ಕೊಂದು ಈಗ ಮುಚ್ಚಿಡೋದಕ್ಕೆ ಪ್ರಯತ್ನ ಮಾಡ್ತೀಯೋ?

ಚಾರುದತ್ತ ಏನಿದು? ಬಹಳ ಅಸಂಬದ್ಧವಾಗಿ ಮಾತಾಡ್ತೀಯಲ್ಲ?

ನ್ಯಾಯಾಧೀಶ ಅವರ ಮಾತು ಬಿಡಿ. ನನ್ನ ಮಾತಿಗೆ ಉತ್ತರ ಹೇಳಿ. ಈ ವೇಶ್ಯೆಯ ಮಗಳು ನಿಮಗೆ ಗೆಳತಿಯೆ?

ಚಾರುದತ್ತ ಹೌದು.

ನ್ಯಾಯಾಧೀಶ ಈಗ ಆಕೆ ಎಲ್ಲಿ ?

ಚಾರುದತ್ತ ಮನೆಗೆ ಹೋದಳು.

ಲೇಖಕ ಹೇಗೆ ಹೋದಳು ? ಯಾವಾಗ ಹೋದಳು ? ಯಾರ ಜೊತೆ ಹೋದಳು ?

ಚಾರುದತ್ತ ಮನೆಗೆ ಹೋದಳು ಬೇರೆ ಏನು ಹೇಳಲಿ ?

ಶಕಾರ ಎಲ್ಲೋ, ಹಣಕ್ಕೆ ಆಸೆಪಟ್ಟು ನಮ್ಮ ಪುಷ್ಪಕರಂಡಕಉದ್ಯಾನದಲ್ಲಿ ಅವಳನ್ನು ಕೈಯಾರೆ ಕೊಂದು. ಈಗ ಮನೆಗೆ ಹೋದಳು ಅಂತ ಸುಳ್ಳು ಹರಟ್ತೀಯಾ ?

ಚಾರುದತ್ತ ಛಿ, ಅಸಂಬದ್ಧಪ್ರಲಾಪಿ ! ಸುಳ್ಳನ್ನು ಸ್ಥಾಪಿಸೋದಕ್ಕೆ ಯತ್ನಿಸ್ತೀಯಾ ? ಕಪ್ಪಿಟ್ಟ ನಿನ್ನ ಮುಖವೇ ಹೇಳುತ್ತೆ, ನೀನು ಸುಳ್ಳು ಹೇಳ್ತಿದೀಯೆ ಅಂತ.

ನ್ಯಾಯಾಧೀಶ (ಜನಾಂತಿಕ) ಪರ್ವತವನ್ನು ತೂಗೋದು, ಸಮುದ್ರ ಈಜೋದು, ಗಾಳಿಯನ್ನು ಹಿಡಿಯೋದು ಎಲ್ಲಾದರೂ ಸಾಧ್ಯವೇ ? ಚಾರುದತ್ತನ ಮೇಲೆ ದೋಷಾರೋಪಣೆ ಮಾಡೋದು ಸಹ ಹಾಗೇ ಅಸಾಧ್ಯ. (ಪ್ರಕಾಶ) ಇಂಥ ತೇಜಸ್ವಿ ಮಾಡಬಾರದ ಕೆಲಸ ಮಾಡಿಯಾನೆ ?

ಶಕಾರ ಏನು ? ನ್ಯಾಯಾಲಯದಲ್ಲಿಯೂ ಪಕ್ಷಪಾತವೊ ?

ನ್ಯಾಯಾಧೀಶ ಛಿ, ಮೂಢ, ! ಬೆಂಕಿಯಲ್ಲಿ ಕೈಯಿಟ್ಟರೆ ಸುಡದೆ ಇದ್ದೀತೆ ? ಹಾಗೇ ಚಾರುದತ್ತನ ಮೇಲೆ ದೋಷ ಹೊರಿಸೋ ನಿನ್ನನ್ನು ನೆಲ ನುಂಗದೆ ಇದ್ದೀತೆ ? ತನ್ನ ಸಂಪತ್ತನ್ನೆಲ್ಲ ಉಳಿದವರ ಹಿತಕ್ಕಾಗಿ ಸೂರೆಮಾಡಿದ ಇಂಥ ದೊಡ್ಡ ವ್ಯಕ್ತಿ ಮತ್ತೊಬ್ಬರ ಒಡವೆಗೆ ಆಸೆಪಟ್ಟು ಅವರನ್ನು ಕೊಂದಾನೆ ?

ಮುದುಕಿ ಅಯ್ಯೋ ಕೀಳುಮನುಷ್ಯ ! ಹಿಂದೆ ನಾವು ಅವನ ಮನೆಯಲ್ಲಿ ಇಟ್ಟ ಒಡವೆಯನ್ನು ಕಳ್ಳರು ಕದ್ದುಕೊಂಡು ಹೋದರೆ ತಾನೇ ಅದನ್ನು ಉಪಯೋಗಿಸಿದೆ ಅಂತ ಹೇಳಿ ಬೆಲೆ ಕಟ್ಟೋದಕ್ಕೇ ಸಾಧ್ಯವಿಲ್ಲದ ಅಮೂಲ್ಯ ಹಾರವನ್ನು ಕಳಿಸಿ ಕೊಟ್ಟವನು ಚಾರುದತ್ತ. ಅಂಥ ಸಂಭಾವಿತ ದುಡ್ಡಿಗಾಗಿ ಕೊಲೆ ಮಾಡ್ತಾನೆಯೇ ? ಅಯ್ಯೋ, ಮಗೂ, ವಸಂತಸೇನ ! ನನ್ನನ್ನು ಬಿಟ್ಟು ಎಲ್ಲಿ ಹೋದೆಯಮ್ಮ ? (ದುಃಖಿಸುವಳು)

ನ್ಯಾಯಾಧೀಶ ಚಾರುದತ್ತ, ವಸಂತಸೇನೆ ರಥದಲ್ಲಿ ಹೋದಳೊ, ನಡೆದುಕೊಂಡು ಹೋದಳೋ ?

ಚಾರುದತ್ತ ನನ್ನ ಎದುರಿನಲ್ಲಿ ಅವಳು ಹೋಗಲಿಲ್ಲ. ಹೇಗೆ ಹೋದಳೋ ತಿಳಿಯದು,

ವೀರಕ (ಪ್ರವೇಶಿಸಿ) ಸ್ವಾಮೀ, ನ್ಯಾಯಾಧಿಪತಿಗಳೆ, ಸೆರೆಯಿಂದ ತಪ್ಪಿಸಿಕೊಂಡ ಆರ್ಯಕನನ್ನು ಹುಡುಕ್ತಿದ್ದೆ. ದಾರಿಯಲ್ಲಿ ತೆರೆ ಹಾಕಿದ ಒಂದು ಬಂಡಿ ಹೋಗ್ತಿತ್ತು. ಅದನ್ನು ನೋಡೋದಕ್ಕೆ ಹೋದದ್ದೇ ತಪ್ಪು ಎನ್ನುವಂತೆ ಜೊತೆ ಅಧಿಕಾರಿ ಚಂದನಕ ನನ್ನನ್ನು ಕಾಲಿಂದ ಒದ್ದ. ವಿಷಯವನ್ನು ಇದ್ದ ರೀತಿಯಲ್ಲಿ ತಮಗೆ ತಿಳಿಸಿದ್ದೇನೆ. ಮುಂದಿನದು ತಮಗೆ ಬಿಟ್ಟಿದ್ದು.

**ನ್ಯಾಯಾಧೀಶ** ಆ ರಥ ಯಾವುದು ಅಂತ ನಿಮಗೆ ಗೊತ್ತೊ ?

**ವೀರಕ** ಓಹೋ ! ಇಲ್ಲಿ ಕುಳಿತಿರೋ ಚಾರುದತ್ತರದೇ. ವಸಂತಸೇನೆ ರಥವಲ್ಲಿ ಇದಾಳೆ ಪುಷ್ಪಕರಂಡಕಜೀರ್ಣೋದ್ಯಾನಕ್ಕೆ ಹೋಗ್ತಿದಾಳೆ ಅಂಥ ಸಾರಥಿ ಹೇಳಿದ.

**ಶಕಾರ** ಎಲ್ಲರೂ ಸರಿಯಾಗಿ ಕೇಳಿದಿರೋ ?

**ನ್ಯಾಯಾಧೀಶ** ಅಯ್ಯೋ, ದಡವೇ ಕುಸಿದು ತಿಳಿನೀರು ಕೆಸರಾಗ್ತಾ ಇದೆಯಲ್ಲ !

**ಭದ್ರಕ** (ಪ್ರವೇಶಿಸಿ) ಸ್ವಾಮಿ. ನ್ಯಾಯಾಧಿಪತಿಗಳೆ, ನಾನು ಪುಷ್ಪಕರಂಡಕ ಜೀರ್ಣೋದ್ಯಾನದ ಬಳಿಯ ಕಾವಲುಗಾರ, ನಿನ್ನೆ ರಾತ್ರಿ ಕಾವಲು ಕಾಯಲು ಹೋದಾಗ ಅಲ್ಲಿ ಒಬ್ಬ ಹೆಂಗಸಿನ ಶವ ಬಿದ್ದಿತ್ತು. ಆದರ ಕೈಕಾಲು, ತಲೆ ಕೂದಲು ಇಷ್ಟು ಮಾತ್ರ ಸರಿಯಾಗಿ ಉಳಿದಿತ್ತು.

**ನ್ಯಾಯಾಧೀಶ** ಅಯ್ಯೋ ನ್ಯಾಯ ವ್ಯವಹಾರದ ವೈಷಮ್ಯ ಎಂಥದು ! ಆಳಕ್ಕೆ ಹೋದಷ್ಟೂ ಸಂಕಟವೇ ಜಾಸ್ತಿಯಾಗ್ತಿದೆ, ಒಂದೇ ಕಡೆಗೆ ಸಾಕ್ಷಿ ಸಂಗ್ರಹವಾಗ್ತಿದೆ. (ಚಾರುದತ್ತನ ಕಡೆ ತಿರುಗಿ) ಅಯ್ಯಾ, ನಿಜ ಏನು ಅಂತ ಹೇಳಿಬಿಡಿ.

**ಚಾರುದತ್ತ** ಏನು ಹೇಳಲಿ ಸ್ವಾಮಿ ? ಹೂ ಕೊಯ್ಯುವಾಗ ಬಳ್ಳಿಯನ್ನು ಬಾಗಿಸಿದರೆ ಅದಕ್ಕೆ ನೋವಾದೀತು ಅಂತ ಯೋಚಿಸೋ ನಾನು ಕೋಮಲೆಯಾದ ಹೆಣ್ಣನ್ನು ಕೈಯಾರೆ ಕೊಂದೆ ಎಂದರೆ ಏನು ಹೇಳಲಿ ?

**ಶಕಾರ** ಏನು ನ್ಯಾಯಾಧಿಪತಿಗಳೆ, ಇದು ? ಎಂಥ ಪಕ್ಷಪಾತ ? ಇಷ್ಟಾದಮೇಲೂ ಈ ನೀಚ ಚಾರುದತ್ತನನ್ನು ಪೀಠದಲ್ಲಿಯೇ ಕೂರಲು ಬಿಟ್ಟಿದ್ದೀರಿ ?

**ನ್ಯಾಯಾಧೀಶ** ಶೋಧನಕ, ಆತನಿಗೆ ಪೀಠದಿಂದ ಇಳಿದು ನೆಲದ ಮೇಲೆ ಕೂರಲು ಹೇಳು.

**ಚಾರುದತ್ತ** (ಎದ್ದು ನೆಲದ ಮೇಲೆ ಕೂರುತ್ತ) ಇನ್ನೂ ವಿಚಾರಿಸಿ ನೋಡಿ. ನ್ಯಾಯಾಧಿಪತಿಗಳೆ.

**ಶಕಾರ** (ಸಂತೋಷಪಡುತ್ತ, ಸ್ವಗತ) ಭಲೆ, ನಾನು ಮಾಡಿದ ಕೆಲಸವನ್ನು ಮತ್ತೊಬ್ಬನ ತಲೆಗೆ ಕಟ್ಟಿದ್ದಾಯಿತು. ಈಗ ಚಾರುದತ್ತ ಕೂತಿದ್ದ ಪೀಠದಲ್ಲಿ ಕುಳಿತುಕೊಳ್ಳೇನೆ. (ಕುಳಿತು. ಪ್ರಕಾಶ) ಎಲೋ ಚಾರುದತ್ತ, ಇಲ್ಲಿ ನೋಡು—ನಾನು ಎಲ್ಲಿ ಕುಳಿತಿದೇನೆ ಅಂತ. ಈಗಲಾದರೂ ಹೇಳು— 'ವಸಂತಸೇನೆಯನ್ನು ನಾನೇ ಕೊಂದೆ' ಅಂತ.

**ಚಾರುದತ್ತ** (ನಿಟ್ಟುಸಿರು ಬಿಟ್ಟು, ಸ್ವಗತ) ಅಯ್ಯೋ, ಮೈತ್ರೇಯ, ದೇವಿ, ರೋಹಸೇನ ! ನನಗೆ ಎಂಥ ಕೇಡು ಸಂಭವಿಸಿದೆ ಅಂತ ತಿಳೀದೆ ದೂರದಲ್ಲಿ ನೆಮ್ಮದಿಯಾಗಿದೀರಿ. ಇದನ್ನು ಕೇಳಿ ಎಷ್ಟು ಸಂಕಟಪಡಲಿದೀರೋ ! ಚಿನ್ನದ ಬಂಡಿ ಮಾಡಿಸಿ ಕೊಡಲು ವಸಂತಸೇನೆ ಕೊಟ್ಟ ಒಡವೆಗಳನ್ನು ವಸಂತಸೇನೆಗೇ ಹಿಂತಿರುಗಿಸಿ ಬಾ ಅಂತ ಮೈತ್ರೇಯನನ್ನು ಕಳಿಸಿದ್ದೆ. ಅವನೂ ಬರಲಿಲ್ಲ.

ವಿದೂಷಕ (ಒಡವೆಗಳನ್ನು ಹಿಡಿದುಕೊಂಡು ಬಂದು) ಒಡವೆ ತೆಗೆದುಕೊಂಡು ವಸಂತಸೇನೆಯ ಮನೆಗೆ ಹೋಗುವಷ್ಟರಲ್ಲೇ ಚಾರುದತ್ತನನ್ನು ನ್ಯಾಯಾಸ್ಥಾನಕ್ಕೆ ಕರೆದುಕೊಂಡು ಹೋದರು ಅಂತ ಕೇಳಿ ಇಲ್ಲಿಗೇ ಬಂದೆ, ಎಲ್ಲಿ ನನ್ನ ಮಿತ್ರ ? ಅಯ್ಯಾ ಅಧಿಕಾರಿಗಳೆ ಕ್ಷೇಮವೇ ? ನಮ್ಮ ಚಾರುದತ್ತ ಎಲ್ಲಿ ?

ನ್ಯಾಯಾಧೀಶ ಇಗೋ, ಇಲ್ಲೇ ಇದಾರೆ.

ವಿದೂಷಕ ಮಿತ್ರ, ನಿನಗೆ ಶುಭವಾಗಲಿ.

ಚಾರುದತ್ತ ಮುಂದೆ ಆದೀತು.

ವಿದೂಷಕ ನಿನಗೆ ಕ್ಷೇಮವಷ್ಟೆ ?

ಚಾರುದತ್ತ ಅದೂ ಮುಂದೆ ಆದೀತು.

ವಿದೂಷಕ ಯಾಕೆ ಮಿತ್ರ, ಇಷ್ಟು ಬೇಸರಗೊಂಡಿದೀಯೆ ? ನಿನ್ನನ್ನು ಯಾಕೆ ಇಲ್ಲಿಗೆ ಕರೆಸಿದಾರೆ.

ಚಾರುದತ್ತ ಮೈತ್ರೇಯ, ನೀಚನಾದ ನಾನು ಪರಲೋಕದ ಲಕ್ಷ್ಯವೂ ಇಲ್ಲದೆ ರತಿದೇವಿಯಂತಿದ್ದ... ಮುಂದಕ್ಕೆ ಇವನೇ ಹೇಳುವನು.

ವಿದೂಷಕ ಏನು, ಏನು ?

ಚಾರುದತ್ತ (ಕಿವಿಯಲ್ಲಿ ಹೇಳುವನು)

ವಿದೂಷಕ ಹೀಗೆ ಹೇಳಿದವನು ಯಾರು ?

ಚಾರುದತ್ತ (ಶಕಾರನ ಕಡೆ ತೋರಿಸಿ) ಈತ ಅಥವಾ ವಿಧಿಯೇ ಇವನಿಂದ ಹಾಗೆ ಹೇಳಿಸ್ತಿದೆ ಅನ್ನಬೇಕು.

ವಿದೂಷಕ (ಜನಾಂತಿಕ) ಅವಳು ಮನೆಗೆ ಹೋದ ಸತ್ಯಸಂಗತಿಯನ್ನು ನೀನು ಏಕೆ ಹೇಳಲಿಲ್ಲ ?

ಚಾರುದತ್ತ ಹೇಳಿದೆ. ಆದರೆ ನನ್ನ ಗ್ರಹಚಾರ. ಅಧಿಕಾರಿಗಳು ಅದನ್ನು ನಿಜ ಅಂತ ನಂಬೋದಿಲ್ಲ.

ವಿದೂಷಕ ಅಯ್ಯಾ, ಮಹನೀಯರೆ ! ಯಾವ ವ್ಯಕ್ತಿ ಈ ಉಜ್ಜಯಿನೀ ನಗರದ ಹಿತಕ್ಕಾಗಿ ಬೇಕಾದಷ್ಟು ಕೆರೆ, ಕೊಳ, ಬಾವಿ, ಉದ್ಯಾನಗಳನ್ನು ಮಾಡಿಸಿ ಕೊಟ್ಟನೋ ಅಂಥ ಪುಣ್ಯಾತ್ಮ ಹಣಕ್ಕೆ ಆಸೆ ಪಟ್ಟು ಇಂಥ ನೀಚ ಕೆಲಸ ಮಾಡಿಯಾನೆ ? (ಕೋಪದಿಂದ ಶಕಾರನ ಕಡೆ ತಿರುಗಿ) ಎಲೋ ಸೂಳೆಯ ಮಗನೆ, ದೊರೆಯ ಮೈದುನ, ಸಲ್ಲದ ಅಪವಾದವನ್ನು ಕಂಡವರ ಕೊರಳಿಗೆ ಕಟ್ಟೋ ನೀಚ. ಎಲ್ಲಿ ನನ್ನ ಎದುರಿಗೆ ಆ ಮಾತು ಹೇಳು, ನೋಡೋಣ. ನಿನ್ನ ಮನಸ್ಸಿನಂತೆ ವಕ್ರವಾಗಿರೊ ಈ ದೊಣ್ಣೆಯಿಂದ ನಿನ್ನ ತಲೆಯನ್ನು ಚೂರು ಚೂರು ಮಾಡಿಬಿಡ್ತೇನೆ.

ಶಕಾರ  (ಕೋಪದಿಂದ) ಅಯ್ಯಾ, ಇಲ್ಲಿ ನೋಡಿ. ನನ್ನ ವ್ಯವಹಾರವೆಲ್ಲ ಚಾರುದತ್ತನ ಜೊತೆ. ಈ ಕಾಗೆ ಕಾಲಿನ ಜುಟ್ಟಿನವನು ನನ್ನ ತಲೆಯನ್ನು ಚೂರು ಮಾಡೋದು ಯಾಕೆ ? ಲೋ. ಸೂಳೆಯ ಮಗನೆ, ದುಷ್ಟ, ತಲೆಹೋಕ !...

ವಿದೂಷಕ  (ಕೋಪದಿಂದ) ನೀಚ, ಅನ್ಯಾಯವಾಗಿ ಮಾತಾಡ್ತೀಯ ? ನಿನ್ನ ತಲೆಯನ್ನು ಈಗಲೆ ಒಡೆದು ಹಾಕ್ತೇನೆ. (ಇಬ್ಬರೂ ಹೊಡೆದಾಡುವರು. ಮಧ್ಯೆ ವಿದೂಷಕನ ಕಂಕುಳಿಂದ ಆಭರಣದ ಗಂಟು ಬೀಳುವುದು)

ಶಕಾರ  (ಸಂಭ್ರಮದಿಂದ ಅವುಗಳನ್ನು ಎತ್ತಿಕೊಂಡು) ನೋಡಿಯಪ್ಪ, ನೋಡಿ. ಎಲ್ಲಾ ನೋಡಿ. ಇವೇ ಆ ವಸಂತಸೇನೆಯ ಒಡವೆ ಇವಕ್ಕಾಗಿಯೇ ಚಾರುದತ್ತ ಅವಳನ್ನು ಕೊಂದದ್ದು. (ನ್ಯಾಯಧೀಶ ತಲೆಬಾಗಿಸುವನು)

ಚಾರುದತ್ತ  ಈ ಆಭರಣಗಳು ಈ ಹೊತ್ತಿಗೇ ಇಲ್ಲಿಗೇ ಬರಬೇಕೆ ? ನಮ್ಮ ದುರದೃಷ್ಟ !

ವಿದೂಷಕ  ಏನೀಗ ? ಸತ್ಯವಾದದ್ದನ್ನು ಏಕೆ ಹೇಳಬಾರದು ?

ಚಾರುದತ್ತ  ಸತ್ಯ ನ್ಯಾಯಾಲಯ ಗ್ರಹಿಸಲಾಗದಷ್ಟು ಜಟಿಲವಾಗಿದೆ. ಹೇಳಿಕೊಳ್ಳೋದರಿಂದ ದೀನರಾಗ್ತೇವೆ. ಅದಕ್ಕಿಂತ ಮರಣವೇ ಶ್ರೇಷ್ಠ.

ನ್ಯಾಯಾಧೀಶ  ಧೂಮಕೇತುವಿನ ಹಾಗೆ ಇದೊಂದು ಪ್ರಸಂಗ ತಲೆಹಾಕಿತಲ್ಲ.

ಲೇಖಕ  (ಮುದುಕಿಯನ್ನು ಕುರಿತು) ಅಮ್ಮಾ, ಚೆನ್ನಾಗಿ ಗಮನಿಸಿ ಹೇಳಿ. ಇವು ನಿನ್ನ ಮಗಳ ಆಭರಣಗಳೋ ?

ಮುದುಕಿ  ಅವುಗಳ ಹಾಗೇ ಇವೆ. ಆದರೆ ಅವೇ ಅಲ್ಲ.

ಶಕಾರ  ಎಲಾ, ತಲೆಹಿಡಕಿ ! ಕಣ್ಣಿಂದ ಹೇಳಿದ್ದನ್ನು ಬಾಯಿಂದ ಮರೆಸ್ತೀಯಾ ?

ಮುದುಕಿ  ಛಿ, ದುಷ್ಟ !

ಲೇಖಕ  ಸರಿಯಾಗಿ ನೋಡಿ ಹೇಳಮ್ಮ, ಅವೇ ಹೌದೋ ಅಲ್ಲವೋ ಅಂತ.

ಮುದುಕಿ  ಅಕ್ಕಸಾಲಿಯ ಕೌಶಲದಿಂದ ಇವು ನನ್ನ ಕಣ್ಣು ಸೆಳೆದವು. ಆದರೆ ಇವು ಆ ಒಡವೆ ಅಲ್ಲ.

ನ್ಯಾಯಾಧೀಶ  ಅಮ್ಮಾ, ಈ ಒಡವೆ ಗುರುತು ಸಿಕ್ಕಿತೆ ?

ಮುದುಕಿ  ಇಲ್ಲ, ಸ್ವಾಮಿ. ಇದು ಬೇರೆ ಒಡವೆ. ಒಬ್ಬನೇ ಅಕ್ಕಸಾಲಿ ಎರಡನ್ನು ಮಾಡಿರಬಹುದು.

ನ್ಯಾಯಾಧೀಶ  ನಿಪುಣರಾದ ಅಕ್ಕಸಾಲಿಗಳು ಒಂದು ಒಡವೆ ನೋಡಿ ಅದರ ಹಾಗೆ ಮತ್ತೊಂದನ್ನು ಮಾಡೋದುಂಟು.

ಲೇಖಕ  (ಚಾರುದತ್ತನ ಕಡೆ ತಿರುಗಿ) ಇವು ನಿಮ್ಮ ಒಡವೆ ತಾನೆ ?

ಚಾರುದತ್ತ  ಅಲ್ಲ, ಅಲ್ಲ.

| | |
|---|---|
| ಲೇಖಕ | ಹಾಗಾದರೆ ಯಾರದ್ದು ? |
| ಚಾರುದತ್ತ | ಈಕೆಯ ಮಗಳದ್ದು. |
| ಲೇಖಕ | ಇವು ಅವಳಿಂದ ಬೇರೆಯಾದದ್ದು ಹೇಗೆ ? |
| ಚಾರುದತ್ತ | ಹೀಗೆ. ಇವು... |
| ಲೇಖಕ | ಅಯ್ಯಾ, ಸತ್ಯ ಹೇಳಿ. ಸತ್ಯದಿಂದಲೇ ಶುಭ. ಸುಳ್ಳಿನಿಂದ ಅದನ್ನು ಮುಚ್ಚಬಾರದು. |
| ಚಾರುದತ್ತ | ಒಡವೆಯ ಬಗ್ಗೆ ನನಗೆ ಇನ್ನೇನೂ ಗೊತ್ತಿಲ್ಲ. ಈ ಆಭರಣ ನಮ್ಮ ಮನೆಯಿಂದ ಬಂದವು ಅನ್ನೋದು ಮಾತ್ರ ನಿಜ. |
| ಶಕಾರ | ಲೋ, ಭಂಡ, ಅವಳನ್ನು ಉದ್ಯಾನಕ್ಕೆ ಕರೆದುಕೊಂಡು ಹೋಗಿ ಕೊಲೆ ಮಾಡಿ ಈಗ ಬಾಯಿ ಬಡೀತೀಯೋ ? |
| ನ್ಯಾಯಾಧೀಶ | ಅಯ್ಯಾ, ಸತ್ಯ ಹೇಳಿ. ಇಲ್ಲದಿದ್ದರೆ ಚಾವಟಿಯಿಂದ ಹೊಡೆಸಬೇಕಾಗುತ್ತೆ. |
| ಚಾರುದತ್ತ | ಸ್ವಾಮಿ, ಉತ್ತಮ ವಂಶದಲ್ಲಿ ಬಂದ ನಾನು ಖಂಡಿತ ಈ ಪಾಪಕೃತ್ಯ ಮಾಡಿಲ್ಲ. ಇಷ್ಟಾಗಿಯೂ ನನ್ನನ್ನು ಪಾಪಿ ಎಂದು ನೀವು ಭಾವಿಸೋದಾದರೆ ಪಾಪಿಯಲ್ಲದಿದ್ದರೂ ತಾನೆ ಏನು ಫಲ ? (ಸ್ವಗತ) ವಸಂತಸೇನೆಯಂಥವಳೇ ತೀರಿದ ಮೇಲೆ ನಾನು ಬದುಕಿ ಏನು ಪ್ರಯೋಜನ ? (ಪ್ರಕಾಶ) ಸ್ವಾಮಿ, ಹೆಚ್ಚು ಹೇಳಿ ಏನು ಬಂತು? ದುಷ್ಟನಾದ ನಾನು ಇಹಪರದ ಯೋಚನೆ ಸಹ ಮಾಡದೆ ರತಿಸಮಾನಳಾದ ಹೆಣ್ಣನ್ನು....ಉಳಿದದ್ದನ್ನು ಇವನೇ ಹೇಳ್ತಾನೆ. |
| ಶಕಾರ | 'ಕೊಂದುಹಾಕಿದೆ'—ಎಲೋ ನೀನೂ ಹೇಳು 'ನಾನು ಕೊಂದುಹಾಕಿದೆ' ಅಂತ. |
| ಚಾರುದತ್ತ | ನೀನೇ ಹೇಳಿದೆಯಲ್ಲ. |
| ಶಕಾರ | ಅಧಿಕಾರಿಗಳೆ, ಕೇಳಿ. ಇವನೇ ಕೊಂದವನು. ಇವನೇ ಬಾಯಿ ಬಿಟ್ಟು ನಿಮ್ಮ ಸಂಶಯ ಪರಿಹಾರ ಮಾಡಿದಾನೆ ಈ ದರಿದ್ರನಿಗೆ ನೀವು ಮರಣದಂಡನೆ ಯನ್ನೇ ವಿಧಿಸಬೇಕು. |
| ನ್ಯಾಯಾಧೀಶ | ಶೋಧನಕ, ಚಾರುದತ್ತನನ್ನು ಬಂಧಿಸು. (ಸೇವಕರು ಚಾರುದತ್ತನನ್ನು ಹಿಡಿದುಕೊಳ್ಳುವರು. ನ್ಯಾಯಾಧೀಶ ಚಾರುದತ್ತನ ಕಡೆ ತಿರುಗಿ) ಅಯ್ಯಾ, ವಿಚಾರಣೆ ಮಾಡಿ ವ್ಯವಹಾರವನ್ನು ತೀರ್ಮಾನಿಸೋದು ಮಾತ್ರ ನಮ್ಮ ಕೈಯಲ್ಲಿದೆ. ಉಳಿದದ್ದು ರಾಜನಿಗೆ ಸೇರಿದ್ದು. ಶೋಧನಕ, ಹೋಗಿ ಪಾಲಕ ಮಹಾರಾಜರಿಗೆ ಈ ವಿಷಯ ತಿಳಿಸು. (ಶೋಧನಕ ಹೋಗುವನು) |
| ಮುದುಕಿ | ಅಯ್ಯಾ, ಇವನನ್ನು ಕ್ಷಮಿಸಿ ಬಿಟ್ಟುಬಿಡಿ. ಈತ ನನ್ನ ಮಗಳನ್ನು ಕೊಂದಿದ್ದರೂ ಚಿಂತೆಯಿಲ್ಲ. ವ್ಯವಹಾರವಿರೋದು ವಾದಿ ಪ್ರತಿವಾದಿಗಳ ನಡುವೆ ತಾನೆ ? ನಾನು ವಾದಿ, ಹೇಳ್ತಿದೇನೆ. ಇವನನ್ನು ಬಿಟ್ಟುಬಿಡಿ. |

**ಶಕಾರ** ಏ ಹುಟ್ಟುಸೂಳೆ ತೊಲಗಾಚೆ. ಅವನಿಗೆ ಏನಾದರೆ ನಿನಗೇನು?

**ನ್ಯಾಯಾಧೀಶ** ಅಮ್ಮಾ, ನೀವು ಹೊರಟುಹೋಗಿ. (ಸೇವಕರ ಕಡೆ ತಿರುಗಿ) ಅಯ್ಯಾ ಈಕೆಯನ್ನು ಹೊರಕ್ಕೆ ಕಳಿಸಿ.

**ಮುದುಕಿ** ಅಯ್ಯೋ ಮಗೂ ! (ಅಳುತ್ತ ಹೋಗುವಳು)

**ಶಕಾರ** ಇವನಿಗೆ ಸರಿಯಾದ ಶಾಸ್ತಿ ಮಾಡಿಸಿದೆ. ಇನ್ನು ಹೋಗ್ತೇನೆ.

**ಶೋಧನಕ** (ಬಂದು) ಸ್ವಾಮಿ, ಪಾಲಕ ಮಹಾರಾಜರು ತಿಳಿಸಿದಾರೆ—"ಯಾವ ಹಾಳು ಒಡವೆ ಸಲುವಾಗಿ ಇವನು ವಸಂತಸೇನೆಯನ್ನು ಕೊಂದನೋ ಆ ಒಡವೆಗಳನ್ನೇ ಇವನ ಕೊರಳಿಗೆ ಕಟ್ಟಿ ಡಂಗುರ ಸಾರಿಸಿ ಶೂಲಕ್ಕೆ ಹಾಕಿಸಿ. ಇಂಥ ಅಕಾರ್ಯ ಮಾಡಿದ ಯಾರೇ ಆದರೂ ಮುಂದೆ ಇದೇ ದಂಡನೆಗೆ ಗುರಿಯಾಗ್ತಾರೆ"—ಅಂತ.

**ನ್ಯಾಯಾಧೀಶ** ರಾಜನ ಆಜ್ಞೆಯಂತೆ ಈತನನ್ನು ವಧಕರಿಗೆ ಒಪ್ಪಿಸಿ.

**ಚಾರುದತ್ತ** ಆಹಾ ! ರಾಜ ಕೂಡ ಎಷ್ಟು ದುಡುಕಿಬಿಟ್ಟ ! ಅಥವಾ ಅವನಿಗೆ ಸಲಹೆ ಕೊಡುವವರು ಅವನನ್ನು ಇಂಥ ಪಾತಕಕ್ಕೆ ತಳ್ಳುತ್ತಿದ್ದಾರೆ. (ವಿದೂಷಕನನ್ನು ಕುರಿತು) ಗೆಳೆಯ, ಮೈತ್ರೇಯ, ನನ್ನ ತಾಯಿಯ ಹತ್ತಿರಕ್ಕೆ ಹೋಗಿ 'ಚಾರುದತ್ತ ನಿಮಗೆ ನಮಸ್ಕಾರ ತಿಳಿಸಿದಾನೆ. ಇದೇ ಅವನ ಕಡೆಯ ನಮಸ್ಕಾರ ಅಂತ ಹೇಳು. ನಮ್ಮ ರೋಹಸೇನನನ್ನು ಚೆನ್ನಾಗಿ ಕಾಪಾಡೋದು ನಿನ್ನ ಭಾರ'.

**ವಿದೂಷಕ** ಗೆಳೆಯ, ಬುಡವನ್ನೇ ಕಡಿದ ಮೇಲೆ ಮರದ ಸಂರಕ್ಷಣೆಯೇ ?

**ಚಾರುದತ್ತ** ಹಾಗೆ ಹೇಳಬೇಡಪ್ಪ. ಪರಲೋಕ ಸೇರಿದವರಿಗೆ ಮಕ್ಕಳು ಪ್ರತಿಬಿಂಬಗಳಂತೆ. ಆದ್ದರಿಂದ ನನ್ನಲ್ಲಿ ಇಟ್ಟ ಪ್ರೀತಿಯನ್ನೇ ನಮ್ಮ ರೋಹಸೇನನಲ್ಲೂ ಇಡು.

**ವಿದೂಷಕ** ಮಿತ್ರ, ಇಷ್ಟು ದಿನ ನಿನ್ನ ಸ್ನೇಹಿತನಾಗಿದ್ದು, ಈಗ ನೀನು ತೀರಿದ ಮೇಲೆ ಬದುಕಿರಲೆ ?

**ಚಾರುದತ್ತ** ಆ ಮಾತು ಬಿಡು ಮೈತ್ರೇಯ. ರೋಹಸೇನನನ್ನು ಒಂದು ಸಲ ನೋಡಬೇಕು ಅನ್ನಿಸ್ತಿದೆ. ಕರೆದುಕೊಂಡು ಬರ್ತೀಯಾ ?

**ವಿದೂಷಕ** ಆಗಲಿ, ಮಿತ್ರ.

**ನ್ಯಾಯಾಧೀಶ** ಶೋಧನಕ, ಈ ವಟುವನ್ನು ಹೊರಗೆ ಕಳಿಸು. (ಶೋಧನಕ ವಿದೂಷಕನನ್ನು ಹೊರಗೆ ಕಳಿಸುವನು.)

**ನ್ಯಾಯಾಧೀಶ** ಯಾರಲ್ಲಿ ? ಚಂಡಾಲರಿಗೆ ರಾಜಾಜ್ಞೆ ತಿಳಿಸಿ.

**ಶೋಧನಕ** ಸ್ವಾಮೀ, ಚಾರುದತ್ತರೆ, ಈ ಕಡೆ ಬರಬೇಕು.

ಚಾರುದತ್ತ (ಆಕಾಶದ ಕಡೆ ನೋಡುತ್ತ) ಎಲೋ ರಾಜ ! ಅಪರಾಧಿಯ ದೋಷವನ್ನು ತಿಳಿಯುವುದಕ್ಕೆ ವಿಷಪರೀಕ್ಷೆ, ಜಲಪರೀಕ್ಷೆ, ಅಗ್ನಿಪರೀಕ್ಷೆಯಂಥ ಅನೇಕ ದಾರಿಗಳಿದ್ದರೂ ಯಾವುದನ್ನೂ ಮಾಡದೆ ನನ್ನ ಶತ್ರುವಿನ ಮಾತನ್ನೇ ನೆಚ್ಚಿ ಹೀಗೆ ಮರಣದಂಡನೆ ವಿಧಿಸಿದ್ದೀಯೆ. ನೀಚನಾದ ನೀನು, ನರಕದಲ್ಲಿ ಬೀಳುವಂತಾಗಲಿ !

* * *

## ಹತ್ತನೆಯ ಅಂಕ

(ಇಬ್ಬರು ಚಂಡಾಲರು ಚಾರುದತ್ತನನ್ನು ಕರೆದುಕೊಂಡು ಹೋಗುತ್ತಿರುವರು)

ಆಹಿಂತಕ ಸ್ವಾಮೀ ಸ್ವಲ್ಪ ದಾರಿ ಬಿಡಿ. ಅಯ್ಯಾ, ಸ್ವಲ್ಪ ಪಕ್ಕಕ್ಕೆ ಸರಿಯಿರಿ. ಈತ ಆರ್ಯ ಚಾರುದತ್ತ. ಕೊರಳಿಗೆ ಕಣಗಿಲೆ ಹೂವಿನ ಹಾರ ತೊಡಿಸಿ, ರಾಜಾಜ್ಞೆ ಯಂತೆ ಕೊಲ್ಲೋದಕ್ಕೆ ವಧ್ಯಸ್ಥಾನಕ್ಕೆ ಕರೆದುಕೋಂಡು ಹೋಗ್ತಿದೇವೆ. ಎಣ್ಣೇ ತೀರಿದ ದೀಪದ ಹಾಗೆ ಸ್ವಲ್ಪ ಹೊತ್ತಿನಲ್ಲೇ ಇವನು ಇಲ್ಲವಾಗ್ತಾನೆ.

ಗೋಹ ದಾರಿ ಬಿಡಿಯಪ್ಪಾ ! ಹಾಗೆ ಗುಂಪು ಸೇರಿ ನಿಲ್ಲಬೇಡಿ. ಇವನನ್ನು ಹಾಗೆ ನಿಂತು ನೋಡ್ತೀರಿ ಯಾಕೆ ? ಹಕ್ಕಿಗಳಿಗೆ ನೆಲೆಯಾದ ವೃಕ್ಷದ ಹಾಗೆ ಈತ ಗುಣವಂತರಿಗೆ ದೊಡ್ಡ ಆಶ್ರಯವಾಗಿದ್ದ ಮಹಾನುಭಾವ. ಈಗ ಕಾಲನ ಕೊಡಲಿಯೇಟಿಗೆ ಗುರಿಯಾಗಿದಾನೆ.

ಚಾರುದತ್ತ (ನಿರ್ವೇದದಿಂದ) ಅಯ್ಯೋ ಮನುಷ್ಯನ ಬದುಕೇ ! ಇದರ ಗತಿ ಹೀಗೇ ಅಂತ ಯಾರು ಹೇಳಬಲ್ಲರು ? ಎಂಥ ದೆಸೆಯಲ್ಲಿದ್ದ ನಾನು ಎಂಥ ಸ್ಥಿತಿಗೆ ಬಂದು ಬಿದ್ದೆ ! ಮೈತುಂಬ ಕೆಂಪು ಗಂಧದಲ್ಲಿ ಅದ್ದಿ ಮಾಡಿದ ಅಂಗೈ ಗುರುತುಗಳು ! ಕೊರಳಿಗೆ ಕಣಗಿಲೆ ಹಾರ ! ಮನುಷ್ಯನಾಗಿದ್ದ ನಾನು ಈಗ ಬಲಿಪೀಠಕ್ಕೆ ಹೋಗ್ತಾ ಇರೋ ಪಶುವಾಗಿದೀನಿ ! (ಮುಂದೆ ನೋಡಿ) ಪಾಪ ! ಜನ ನನ್ನ ಸ್ಥಿತಿ ಕಂಡು ಕಣ್ಣೀರು ಸುರಿಸ್ತಿದಾರೆ. ನನಗೆ ಸ್ವರ್ಗ ದೊರೆಯಲಿ ಅಂತ ಹರಸ್ತಿದಾರೆ. ಅವರು ತಾನೇ ಬೇರೆ ಏನು ಮಾಡಿಯಾರು ? ನನ್ನನ್ನು ಕಾಪಾಡೋ ಶಕ್ತಿ ಅವರಿಗೆಲ್ಲಿದೆ ?

ಆಹಿಂತಕ ಚಾರುದತ್ತ, ಇಲ್ಲಿ ನಿಲ್ಲು. ಇದೇ ಡಂಗುರ ಸಾರಬೇಕಾದ ಜಾಗ. (ತಮಟೆ ಹೊಡೆದು ನಿಲ್ಲಿಸಿ) ಅಯ್ಯಾ, ಕೇಳಿ, ಕೇಳಿ. ಇವನು ಸಾಹುಕಾರ ವಿನಯದತ್ತನ ಮೊಮ್ಮಗ ; ಸಾಗರದತ್ತನ ಮಗ—ಚಾರುದತ್ತ. ಇವನು ಹೊನ್ನಿಗೆ ಆಸೆಪಟ್ಟು ಗಣಿಕೆ ವಸಂತಸೇನೆಯನ್ನು ಪುಷ್ಪಕರಂಡಕ ಜೀರ್ಣೋದ್ಯಾನಕ್ಕೆ ಕರೆದುಕೊಂಡು ಹೋಗಿ ಕತ್ತು ಹಿಸುಕಿ ಕೊಂದಿದ್ದಾನೆ. ಒಡವೆ ಸಹಿತ ಸಿಕ್ಕಿ ಬಿದ್ದು ತನ್ನ ತಪ್ಪನ್ನು ಒಪ್ಪಿಕೊಂಡಿದ್ದಾನೆ. ಪಾಲಕ

ಮಹಾರಾಜರು ಇವನನ್ನು ಕೊಲ್ಲುವಂತೆ ಆಜ್ಞಾಪಿಸಿದ್ದಾರೆ. ಯಾರು ಇಂತಹ ಅಕಾರ್ಯ ಮಾಡುವರೋ ಅವರಿಗೆಲ್ಲ ಇದೇ ಶಿಕ್ಷೆ ವಿಧಿಸಲಾಗುವುದು.

ಚಾರುದತ್ತ ಅಯ್ಯೋ ಎಂಥ ಪರಿಶುದ್ಧವಾದ ವಂಶದಲ್ಲಿ ಹುಟ್ಟಿ ಬಂದೆ ! ಆ ವಂಶವನ್ನು ಹೀಗೆ ದಾರಿಯಲ್ಲಿ ನಿಂದಿಸಿ ಸಾರುವ ಹಾಗಾಯ್ತಲ್ಲ ! (ಉದ್ವೇಗದಿಂದ ಕಿವಿ ಮುಚ್ಚಿಕೊಂಡು) ಪ್ರಿಯೆ, ವಸಂತಸೇನೆ ! ನಿನ್ನನ್ನು ನಾನು ಕೊಂದೆ ಅನ್ನೋ ಈ ನಿಂದೆಯನ್ನು ಹೇಗೆ ಸಹಿಸಿಕೊಳ್ಳಲಿ ? (ಸುತ್ತಲೂ ನೋಡಿ) ಪರಿಚಿತರು, ಸ್ನೇಹಿತರು ನನ್ನನ್ನು ಕಂಡೂ ಕಾಣದವರ ಹಾಗೆ ಮುಖ ಮರೆಸಿಕೊಂಡು ಹೋಗ್ತಿದಾರೆ. ಅದೂ ಸರಿಯೆ. ಲೋಕದ ರೀತಿಯೇ ಹಾಗೆ. ಭಾಗ್ಯದ ದಿನಗಳಲ್ಲಿ ಅಪರಿಚಿತರೂ ಆತ್ಮೀಯರಂತೆ ತೋರಿಸಿಕೊಳ್ತಾರೆ. ಕೇಡು ಒದಗಿದಾಗ ಆತ್ಮೀಯರೂ ಅಪರಿಚಿತರಾಗಿಬಿಡ್ತಾರೆ...

(ತೆರೆಯಲ್ಲಿ ಅಯ್ಯೋ ಅಪ್ಪಾ ! ಅಯ್ಯೋ, ಮಿತ್ರ ಚಾರುದತ್ತ ! ಎಂಬ ಕೂಗು ಕೇಳುವುದು. ಚಾರುದತ್ತ ಚಂಡಾಲರ ಕಡೆ ತಿರುಗಿ)

ಅಪ್ಪಾ ! ನಿಮ್ಮಲ್ಲಿ ಒಂದು ಪ್ರಾರ್ಥನೆ ಇದೆ.

ಗೋಹ ಛೆ, ಛೆ, ಚಂಡಾಲರಾದ ನಮ್ಮನ್ನು ನೀನು ಹೀಗೆ ಬೇಡಿಕೊಳ್ಳೋದೆ ?

ಚಾರುದತ್ತ ಶಿವ ಶಿವಾ ! ಚಂಡಾಲರು ಪಾಲಕ ರಾಜನಂತೆ ಅವಿಚಾರಿಗಳಾಗಲೀ, ದುರಾಚಾರಿಗಳಾಗಲೀ ಅಲ್ಲ. ಅಪ್ಪಾ! ಇದು ನನ್ನ ಕಡೆ ಗಳಿಗೆ. ಆದ್ದರಿಂದ ನನ್ನ ಹುಡುಗ ರೋಹಸೇನನ ಮುಖ ನೋಡಲು ಅವಕಾಶ ಕೊಡಿ ಅಂತ ನಿಮ್ಮನ್ನು ಬೇಡಿಕೊಳ್ತೇನೆ.

ಆಹಿಂತಕ (ರಂಗದ ಬದಿಯನ್ನು ನೋಡಿ) ಮಗೂ, ಬಾ ಇಲ್ಲಿ.

(ವಿದೂಷಕನು ರೋಹಸೇನನ ಜೊತೆಯಲ್ಲಿ ಬರುವನು. ಇಬ್ಬರೂ ಅಳುತ್ತಿರುವರು.)

ರೋಹಸೇನ ಅಪ್ಪಾ ! ಅಪ್ಪಾ ! (ಎಂದು ಕೂಗುತ್ತ ಬಂದು ತಂದೆಯನ್ನು ತಬ್ಬಿಕೊಳ್ಳುವನು)

ವಿದೂಷಕ ಮಿತ್ರ, ಚಾರುದತ್ತ, ನಿನ್ನನ್ನು ಇನ್ನು ಎಲ್ಲಿ ನೋಡಲಿ ?

ಆಹಿಂತಕ ಏ ಚಾರುದತ್ತ, ಹೊತ್ತಾಯಿತು, ನಡಿ.

ವಿದೂಷಕ ಇವರು ಸಹ ಏ ಚಾರುದತ್ತ ಎಂದು ಕರೆಯೋ ಹಾಗಾಯಿತೆ !

ರೋಹಸೇನ ಅಯ್ಯಾ ಚಂಡಾಲರೆ, ನಮ್ಮ ತಂದೆಯನ್ನು ಎಲ್ಲಿಗೆ ಕರೆದುಕೊಂಡು ಹೋಗ್ತೀರಿ?

ಚಾರುದತ್ತ ವಧ್ಯಸ್ಥಾನಕ್ಕೆ ಮಗೂ.

ಗೋಹ ಮಗೂ, ಚಂಡಾಲ ಕುಲದಲ್ಲಿ ಹುಟ್ಟಿದ್ದರೂ ನಾವು ನಿಜವಾಗಿ ಚಂಡಾಲರಲ್ಲ. ಯಾರು ಸಜ್ಜನರನ್ನು ಹಿಂಸೆ ಮಾಡ್ತಾರೋ ಅವರೇ ಚಂಡಾಲರು.

ರೋಹಸೇನ ಹಾಗಾದರೆ ನಮ್ಮ ತಂದೆಯನ್ನು ಯಾಕೆ ಕೊಲ್ತೀರಿ ?

ಗೋಹ ಮಗೂ. ನಿಮ್ಮ ತಂದೆಯನ್ನು ಕೊಲ್ಲೋದು ರಾಜಾಜ್ಞೆ. ನಾವಲ್ಲ.

ರೋಹಸೇನ ನಮ್ಮ ತಂದೆಯ ಬದಲು ನನ್ನನ್ನು ಕೊಲ್ಲಿ : ಅವರನ್ನು ಬಿಟ್ಟು ಬಿಡಿ.

ಗೋಹ ಹೀಗೆ ಹೇಳುವ ನೀನು ದೀರ್ಘಾಯುಷಿಯಾಗು ಮಗೂ.

ಚಾರುದತ್ತ ಬಾ, ಮಗೂ (ರೋಹಸೇನನನ್ನು ಅಪ್ಪಿಕೊಂಡು) ಇದು ಸ್ನೇಹದ ಸರ್ವಸ್ವ ! ಬಡವ ಸಿರಿವಂತ ಎಂಬ ಭೇದವಿಲ್ಲದೆ ದೊರೆಯುವಂಥ ಅಮೂಲ್ಯವಸ್ತು ! ಹೃದಯದ ಎಲ್ಲ ತಾಪವನ್ನೂ ನಿವಾರಿಸುವಂಥ ತಂಪಾದ ಚಂದನ ! (ಅವನನ್ನು ಬಿಟ್ಟು) ಮಗೂ, ಇನ್ನು ನಾನು ಹೊರಡ್ತೀನಿ.

ವಿದೂಷಕ ಅಯ್ಯಾ,ನಮ್ಮ ಚಾರುದತ್ತನನ್ನು ಬಿಟ್ಟುಬಿಡಿ : ಬದಲು ನನ್ನನ್ನು ಕೊಲ್ಲಿ.

ಚಾರುದತ್ತ ಶಿವ ಶಿವಾ ! ಅಂಥ ಮಾತು ಆಡಬೇಡ ಮಿತ್ರ.

ಅಹಿಂತಕ ಲೋ, ಗೋಹ, ಎರಡನೆಯ ಸ್ಥಳ ಬಂತು. ಇಲ್ಲಿ ಮತ್ತೆ ಸಾರಬೇಕು. (ತಮಟೆ ಹೊಡೆದು ನಿಲ್ಲಿಸಿ) ಅಯ್ಯಾ. ಕೇಳಿ ಕೇಳಿ.... (ಎಂದು ಸಾರುತ್ತ ಹೋಗುವನು. ಅವನ ಹಿಂದೆ ಉಳಿದವರೂ ಹೋಗುವರು)

(ಉಪ್ಪರಿಗೆಯ ಮೇಲೆ ಕಾಲಿಗೆ ಬೇಡಿ ಹಾಕಿರುವ ಸ್ಥಾವರಕನ ಪ್ರವೇಶ)

ಸ್ಥಾವರಕ ಅಯ್ಯೋ ! ಇದೇನು ನಾನು ಕೇಳಿದ್ದು ? ನಿರಪರಾಧಿಯಾದ ಚಾರುದತ್ತ ಸಾಯುವನೇ ? ಅಯ್ಯೋ ! ಇದು ಅನ್ಯಾಯ. ನಿಜಸಂಗತಿಯನ್ನು ಇಲ್ಲಿಂದಲೇ ಗಟ್ಟಿಯಾಗಿ ಕೂಗಿ ತಿಳಿಸ್ತೇನೆ. ಅಯ್ಯಾ, ಕೇಳಿ. ಪಾಪಿಯಾದ ನಾನು ತಿಳಿಯದೆ ವಸಂತಸೇನೆಯನ್ನು ಪುಷ್ಪಕರಂಡಕ ಉದ್ಯಾನಕ್ಕೆ ಕರೆದೊಯ್ದವನು. ಅಲ್ಲಿ ನನ್ನ ಯಜಮಾನ ಶಕಾರ ವಸಂತಸೇನೆಯನ್ನು ಕತ್ತು ಹಿಸುಕಿ ಕೊಂದ. ಚಾರುದತ್ತ ನಿರಪರಾಧಿ... ಅಯ್ಯೋ ! ತುಂಬ ದೂರವಾದ್ದರಿಂದ ನಾನು ಕೂಗುವುದು ಯಾರಿಗೂ ಕೇಳುತ್ತಿಲ್ಲವಲ್ಲ. (ಯೋಚಿಸಿ) ಇರಲಿ ಈ ಕಿಟಕಿಯಿಂದ ಕೆಳಕ್ಕೆ ಧುಮುಕಿ ಅವರ ಬಳಿ ಹೋಗಿ ಈ ವಿಷಯ ತಿಳಿಸ್ತೇನೆ. ಧುಮುಕಿದಾಗ ಪೆಟ್ಟಾಗಿ ಸತ್ತರೂ ಚಿಂತೆಯಿಲ್ಲ. (ಧುಮುಕಿ) ಎಲಾ ! ಆಶ್ಚರ್ಯ, ಸಾಯುವುದು ಹೋಗಲಿ. ಕಾಲಿನಲ್ಲಿದ್ದ ಬೇಡಿಯೇ ಕಿತ್ತುಹೋಯಿತು. ಇರಲಿ. (ಓಡಿಹೋಗುವನು)

(ಶಕಾರನ ಪ್ರವೇಶ)

ಶಕಾರ ಈ ದಿನ ಸಂತೋಷವಾಗಿ ಮೀನು ಮಾಂಸ ಭಕ್ಷ್ಯಭೋಜ್ಯ ತಿಂದು ಬಂದೆ. (ಕಿವಿಗೊಟ್ಟು ಕೇಳಿ) ಈ ಒಡೆದ ಕಂಚಿನ ಶಬ್ದದ ಹಾಗೆ ಇರೋದು ಚಂಡಾಲರ ದನಿ ಅಂತ ಕಾಣುತ್ತೆ. ತಮಟೆಯ ಬಡಿತ ಬೇರೆ ಕೇಳ್ತಿದೆ. ಬಹುಶಃ ಆ ದರಿದ್ರ ಚಾರುದತ್ತನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗ್ತಿದಾರೆ ಅಂತ ತೋರುತ್ತೆ. ಹೋಗಿ ನೋಡ್ತೇನೆ. ಶತ್ರು ಸಾಯುವುದನ್ನು ನೋಡೋದು ಎಂಥ ಆನಂದದ ದೃಶ್ಯ ! ಶತ್ರುನಾಶ ನೋಡಿದವನಿಗೆ

ಕಣ್ಣುಬೇನೆ ಬರೋದಿಲ್ಲವಂತೆ. ನಮ್ಮ ಉಪ್ಪರಿಗೆ ಮೇಲೆ ನಿಂತು ಚಾರುದತ್ತನ ವಧೆಯನ್ನು ನೋಡ್ತೇನೆ. ಅಲ್ಲ ! ಈ ದರಿದ್ರ ಚಾರುದತ್ತನನ್ನು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವಾಗಲೇ ಇಷ್ಟು ಜನ ಸೇರ್ತಾರೆ ಅಂದಮೇಲೆ ನನ್ನಂಥ ಪುರುಷಶ್ರೇಷ್ಠನನ್ನು ಕರೆದುಕೊಂಡು ಹೋಗುವಾಗ ಇನ್ನೆಷ್ಟು ಜನ ಬರಬೇಡ ? (ಆಲಿಸಿ) ಇದೇನು ನಮ್ಮ ಮನೆ ಬಾಗಿಲಲ್ಲೇ ತಮಟೆ ಬಡಿತ ನಿಂತುಹೋಯ್ತಲ್ಲ ? ಏನು ಕಾರಣ ? (ಮುಂದೆ ನೋಡಿ) ಎಲಾ ! ನಾನು ಇಲ್ಲಿ ಸೆರೆಹಾಕಿದ್ದ ಸ್ಥಾವರಕ ಎಲ್ಲಿ ಹೋದ ? ಅವನಿಗೆ ನನ್ನ ರಹಸ್ಯವೆಲ್ಲ ಗೊತ್ತಿದೆ. ಅದನ್ನು ಬಯಲು ಮಾಡಿರಲಾರ ತಾನೆ ? ಮೊದಲು ಅವನನ್ನು ಹುಡುಕುತ್ತೇನೆ. (ಹೋಗುವನು)

ವಸಂತಸೇನೆ ಮತ್ತು ಭಿಕ್ಷು ಬರುವರು)

ಭಿಕ್ಷು (ವಸಂತಸೇನೆಗೆ) ನಿನ್ನನ್ನು ಎಲ್ಲಿಗೆ ಕರೆದುಕೊಂಡು ಹೋಗಿ ಬಿಡಲಿ ತಾಯಿ ?

ವಸಂತಸೇನೆ ಚಾರುದತ್ತನ ಮನೆಗೆ. ನಾನು ಮೊದಲು ಅವನನ್ನು ಕಾಣಬೇಕು. ನೇರವಾಗಿ ಅಲ್ಲಿಗೇ ಹೋಗೋಣ.

ಭಿಕ್ಷು ಆಗಲಿ ತಾಯಿ. ಈ ಮಾರ್ಗದಲ್ಲಿ ಹೋಗೋಣ. (ಮುಂದೆ ನೋಡಿ) ಇದೇನು ಇಷ್ಟು ಕೋಲಾಹಲ ?

ವಸಂತಸೇನೆ ಹೌದಲ್ಲ ? ಇದೇನು ಇಂಥ ಜನಸಂದಣಿ. ಇಡೀ ಉಜ್ಜಯಿನಿಯೇ ಬಂದು ಸೇರಿದ ಹಾಗಿದೆ ?

ಭಿಕ್ಷು ಅದೇನು ವಿಚಾರಿಸಿಕೊಂಡು ಹೋಗೋಣ, ನಡಿ ತಾಯಿ.

(ಇಬ್ಬರೂ ಹೋಗುವರು)

(ಚಂಡಾಲರು, ಚಾರುದತ್ತ, ವಿದೂಷಕ, ರೋಹಸೇನ ಮತ್ತು ಜನರು ಬರುವರು)

ಅಹಿಂತಕ ಅಯ್ಯಾ, ಕೇಳಿ ಕೇಳಿ....

(ಸ್ಥಾವರಕ ಓಡಿ ಬರುವನು)

ಸ್ಥಾವರಕ ಅಯ್ಯಾ, ಇಲ್ಲಿ ಕೇಳಿ. ನನ್ನ ಹೆಸರು ಸ್ಥಾವರಕ. ನಾನು ಶಕಾರನ ಬಂಡಿ ಹೊಡೆಯುವವನು. ಪಾಪಿಯಾದ ನಾನೇ ತಿಳಿಯದೆ ವಸಂತಸೇನೆಯನ್ನು ಪುಷ್ಪಕರಂಡಕ ಉದ್ಯಾನಕ್ಕೆ ಕರೆದೊಯ್ದೆ. ಅಲ್ಲಿ ನನ್ನ ಯಜಮಾನ ಶಕಾರ ವಸಂತಸೇನೆಯನ್ನು ತನ್ನ ವಶವಾಗುವಂತೆ ನಿರ್ಬಂಧ ಮಾಡಿದ. ಅವಳು ಒಪ್ಪಲಿಲ್ಲ. ಅದ್ದರಿಂದ ಶಕಾರ ಅವಳನ್ನು ಕತ್ತು ಹಿಸುಕಿ ಕೊಂದ. ಚಾರುದತ್ತ ಪೂರ್ಣವಾಗಿ ನಿರಪರಾಧಿ.

ಚಾರುದತ್ತ (ಸ್ವಗತ) ಯಾರಿವನು ? ಒಣಗುತ್ತಿರುವ ಬೆಳೆಗೆ ಮಳೆಗರೆಯುವ ಮೋಡದಂತೆ ಬಂದವನು ? (ಪ್ರಕಾಶ) ಎಲ್ಲ ಕೇಳಿದಿರಿ ತಾನೆ ? ಅಪಯಶಸ್ಸಿನಿಂದ ಪಾರಾದೆ ಸದ್ಯ ! ಇನ್ನು ನಾನು ಮರಣಕ್ಕೆ ಹೆದರುವವನಲ್ಲ ಸಾವನ್ನು ಪುತ್ರೋತ್ಸವಕ್ಕೆ ಸಮವೆಂದು ಭಾವಿಸುತ್ತೇನೆ.

ಅಹಿಂತಕ ಸ್ಥಾವರಕ ನೀನು ಹೇಳ್ತಿರೋದೆಲ್ಲ ಖಂಡಿತವಾಗಿ ನಿಜವೆ ?

ಸ್ಥಾವರಕ ಖಂಡಿತವಾಗಿ ನಿಜ. ಇದನ್ನೆಲ್ಲ ನಾನು ಯಾರಿಗೂ ತಿಳಿಸಬಾರದು ಅಂತಲೆ ನನ್ನ ಯಜಮಾನ ಕಾಲಿಗೆ ಬೇಡಿ ಹಾಕಿ ನನ್ನನ್ನು ಉಪ್ಪರಿಗೆಯಲ್ಲಿ ಬಂಧಿಸಿ ಇಟ್ಟಿದ್ದರು. ಅಗೋ ಅವರೇ ಬರ್ತಿದಾರೆ.

ಗೋಹ ಅಯ್ಯಾ ದಾರಿ ಬಿಡಿ. ಎಚ್ಚರವಾಗಿರಿ. ತುಂಟ ಗೂಳಿ ಬರ್ತಿದೆ.

ಶಕಾರ (ಬಂದು) ಎಲಾ. ದಾರಿ ಬಿಡಿ. (ಸ್ಥಾವರಕನ ಹತ್ತಿರಕ್ಕೆ ಬಂದು) ಅಪ್ಪಾ, ಸ್ಥಾವರಕ. ಬಾಪ್ಪ. ಹೋಗೋಣ.

ಸ್ಥಾವರಕ ಛೀ, ಅಯೋಗ್ಯ. ವಸಂತಸೇನೆಯನ್ನು ಕೊಂದು ತೃಪ್ತಿಯಾಗಲಿಲ್ಲ ಅಂತ ಕಾಣುತ್ತೆ. ಚಾರುದತ್ತನಂಥ ಸಜ್ಜನನನ್ನು ಕೊಲ್ಲಿಸೋದಕ್ಕೆ ಹೊರಟಿದೀಯಾ ?

ಶಕಾರ ಏನಂದೆ ? ನಾನು ಅಪ್ಪಟ ಚಿನ್ನದಂಥ ಮನುಷ್ಯ. ಹೆಣ್ಣನ್ನ ಕೊಲ್ಲೋ ಕೆಲಸ ಮಾಡಿಯೇನೆ ?

ಎಲ್ಲರೂ ಹೌದು. ನೀನೇ, ನೀನೇ ಅವಳನ್ನು ಕೊಂದದ್ದು ; ಚಾರುದತ್ತ ಅಲ್ಲ.

ಶಕಾರ ಯಾರು ಹಾಗೆ ಹೇಳೋರು ?

ಎಲ್ಲರೂ (ಸ್ಥಾವರಕನನ್ನು ತೋರಿಸಿ) ಇಗೋ ಈ ಸಜ್ಜನ.

ಶಕಾರ (ಭಯದಿಂದ ಸ್ವಗತ) ಅಯ್ಯೋ ! ಎಂಥ ಕೆಲಸ ಮಾಡಿಕೊಂಡೆ ? ಇವನನ್ನು ನಾನು ಸರಿಯಾಗಿ ಕಟ್ಟಿಹಾಕಲಿಲ್ಲ. ನನ್ನ ರಹಸ್ಯವೆಲ್ಲ ಇವನಿಗೆ ಗೊತ್ತಿದೆಯಲ್ಲ ! ಏನು ಮಾಡಲಿ ? ಇರಲಿ. (ಪ್ರಕಾಶ) ಮಹಾಜನಗಳೇ ಈತ ಹೇಳಿದ್ದೆಲ್ಲ ಹಸಿಸುಳ್ಳು. ಇವನು ನಮ್ಮ ಮನೆಯಲ್ಲಿದ್ದ ಚಿನ್ನದ ಒಡವೆಯೊಂದನ್ನು ಹಾರಿಸಿಬಿಟ್ಟ. ಅದಕ್ಕಾಗಿ ಇವನನ್ನು ಹೊಡೆದು ಕಾಲಿಗೆ ಬೇಡಿ ತೊಡಿಸಿದ್ದೆ. ಆ ಸಿಟ್ಟಿನಿಂದ ನನ್ನ ಮೇಲೆ ಸುಳ್ಳು ಆರೋಪ ಮಾಡ್ತಿದಾನೆ. (ತನ್ನ ಕೈಯಲ್ಲಿರುವ ಚಿನ್ನದ ಕಪ್ಪವನ್ನು ಮರೆಯಲ್ಲಿ ಸ್ಥಾವರಕನ ಕೈಯಲ್ಲಿಟ್ಟು, ಮೆಲ್ಲಗೆ ಅವನಿಗೆ ಮಾತ್ರ ಕೇಳುವಂತೆ) ಎಲೋ. ಇದನ್ನು ತೆಗೆದುಕೊ. ನನ್ನ ಮೇಲೆ ದೂರು ಹೇಳಬೇಡ.

ಸ್ಥಾವರಕ (ಜನಕ್ಕೆ ಕಪ್ಪವನ್ನು ತೋರಿಸುತ್ತ) ಅಯ್ಯಾ, ನೋಡಿ ನೋಡಿ. ನನ್ನ ಮೇಲೆ ದೂರು ಹೇಳಬೇಡ ಅಂತ ಹೇಳಿ ಇದನ್ನು ಲಂಚವಾಗಿ ಕೊಡ್ತಿದ್ದಾರೆ.

ಶಕಾರ (ಕಪ್ಪವನ್ನು ಕಿತ್ತುಕೊಂಡು) ಇಲ್ಲಿ ನೋಡಿ, ಇದೇ ನಾನು ಹೇಳಿದ ಚಿನ್ನದ ಒಡವೆ : ಇದನ್ನು ಕದ್ದದ್ದಕ್ಕೆ ಇವನನ್ನು ಹೊಡೆದು ಕಟ್ಟಿಹಾಕಿದ್ದು. ಬೇಕಾದರೆ ಇವನ ಬೆನ್ನು ನೋಡಿ. ನಾನು ಹೊಡೆದ ಏಟುಗಳ ಗುರುತಿವೆ.

ಚಂಡಾಲರು (ಬೆನ್ನು ನೋಡಿ) ಹೌದು ಗುರುತು ಇದೆ. ಇವರ ಮಾತೇ ನಿಜ. ಸೊಡೆಸ್ಕಿ ಕೊಂಡ ಮನುಷ್ಯ ಏನು ತಾನೆ ಹೇಳಲಾರ ?

ಸ್ಥಾವರಕ ಅಯ್ಯೋ ! ಪರರ ಸೇವೆಯೇ ಕಷ್ಟ. ನಾನು ಎಷ್ಟು ಹೇಳಿದರೂ ಇವರು ನನ್ನನ್ನು ನಂಬೋದಿಲ್ಲ. (ಚಾರುದತ್ತನ ಕಡೆ ತಿರುಗಿ) ಆರ್ಯ ಚಾರುದತ್ತ, ನನ್ನ ಕೈಯಲ್ಲಿ ಸಾಧ್ಯವಾದದ್ದನ್ನೆಲ್ಲ ಮಾಡಿದೆ. ಆದರೆ ಏನೂ ಪ್ರಯೋಜನ ವಾಗಲಿಲ್ಲ. ನಾನು ಏನು ಮಾಡಲಿ ?

ಚಾರುದತ್ತ ಅಪ್ಪಾ, ನನ್ನ ದುರದೃಷ್ಟ. ಅದಕ್ಕೆ ನೀನು ಏನು ಮಾಡಬಲ್ಲೆ ?

ಶಕಾರ ಚಂಡಾಲರೆ, ಇನ್ನೂ ಏಕೆ ನಿಧಾನ ಮಾಡ್ತಿದೀರಿ ? ಇವನನ್ನು ಬೇಗ ಮುಗಿಸಿಬಿಡಿ.

ರೋಹಸೇನ (ಚಂಡಾಲರಿಗೆ) ಸ್ವಾಮಿ, ದಯಮಾಡಿ ನನ್ನ ತಂದೆಯನ್ನು ಬಿಡಿ. ನನ್ನನ್ನು ಕೊಲ್ಲಿ.

ಶಕಾರ ಎಲೋ, ಇವನನ್ನು ಇವನಪ್ಪನನ್ನು ಇಬ್ಬರನ್ನೂ ಕೊಂದುಬಿಡಿ.

ಚಾರುದತ್ತ ಮಗೂ, ಈ ಮೂರ್ಖ ಅದನ್ನೂ ಮಾಡಿಸುವವನೆ. ನೀನು ನಿನ್ನ ತಾಯಿಯ ಹತ್ತಿರ ಹೋಗಪ್ಪ.

ರೋಹಸೇನ ನಿನ್ನನ್ನು ಹೀಗೆ ಬಿಟ್ಟು ಹೇಗೆ ಹೋಗಲಿ ಅಪ್ಪಾ !

ಚಾರುದತ್ತ ದುಃಖಪಡಬೇಡ. ತಾಯಿ ಜೊತೆ ಈಗಲೇ ಹೊರಟುಹೋಗು. ಇಲ್ಲಿದ್ದರೆ ನನ್ನಿಂದಾಗಿ ನಿನಗೂ ದುರವಸ್ಥೆ ಒದಗೀತು. (ಮೈತ್ರೇಯನನ್ನು ನೋಡಿ) ಮಿತ್ರ, ರೋಹಸೇನನನ್ನು ಕರೆದುಕೊಂಡು ಹೋಗು.

ವಿದೂಷಕ ಚಾರುದತ್ತ, ನೀನು ಹೋದ ಮೇಲೂ ನಾನು ಬದುಕಬಲ್ಲೆ ಅಂತ ಭಾವಿಸಿದೆಯ ?

ಚಾರುದತ್ತ ಹಾಗನ್ನಬಾರದು ಮೈತ್ರೇಯ. ಸ್ವತಂತ್ರನಾಗಿರೋ ನೀನು ಕಾರಣವಿಲ್ಲದೆ ಪ್ರಾಣ ಕಳೆದುಕೊಳ್ಳೋದು ಖಂಡಿತ ಸರಿಯಲ್ಲ.

ವಿದೂಷಕ (ಸ್ವಗತ) ಅದೇನೋ ನಿಜವೇ. ಆದರೆ ಇಂಥ ಗೆಳೆಯನನ್ನು ಕಳೆದುಕೊಂಡು ನಾನು ಹೇಗೆ ಉಳಿದೇನು ? ಹುಡುಗನನ್ನು ಅವನ ತಾಯಿಗೆ ಒಪ್ಪಿಸಿ ಸ್ನೇಹಿತನ ಹಾದಿ ಹಿಡೀತೇನೆ. (ಪ್ರಕಾಶ) ನೀನು ಹೇಳಿದ ಹಾಗೇ ಆಗಲಿ. ರೋಹಸೇನನನ್ನು ಕರೆದುಕೊಂಡು ಹೋಗ್ತೇನೆ. (ನಮಸ್ಕಾರ ಮಾಡಿ ಅಳುತ್ತ ಹೋಗುವನು)

**ಶಕಾರ** (ಚಂಡಾಲರಿಗೆ) ಎಲೋ ಇವನನ್ನು ಮಗನ ಸಮೇತ ಕೊಲ್ಲಿ ಅಂತ ಹೇಳಲಿಲ್ಲವೆ ? ಆದರೂ ಆ ಹುಡುಗನನ್ನು ಕಳಿಸ್ತಿದೀರಲ್ಲ ?

**ಆಹಿಂತಕ** ಸ್ವಾಮಿ, ಅವನನ್ನು ಮಗನ ಸಹಿತ ಕೊಲ್ಲುವಂತೆ ನಮಗೆ ರಾಜಾಜ್ಞೆಯಾಗಿಲ್ಲ.

**ಶಕಾರ** (ಸ್ವಗತ) ವಸಂತಸೇನೆಯನ್ನು ಚಾರುದತ್ತ ಕೊಂದ ಅಂತ ಜನ ನಂಬುವಂತೆ ಕಾಣ್ತಿಲ್ಲ. (ಪ್ರಕಾಶ) ಎಲೋ, ಚಾರುದತ್ತ, ಜನಕ್ಕೆ ವಿಷಯ ಏನು ಅಂಶ ಇನ್ನೂ ಸರಿಯಾಗಿ ತಿಳೀತಿಲ್ಲ; ವಸಂತಸೇನೆಯನ್ನು ನಾನೇ ಕೊಂದೆ ಅಂತ ನಿನ್ನ ಬಾಯಿಂದಲೇ ಹೇಳು.

**ಚಾರುದತ್ತ** (ಮೌನವಾಗಿರುವನು)

**ಶಕಾಗ** ಎಲೋ, ಆಹಿಂತಕ ಇವನು ಮಾತಿಗೆ ಬಗ್ಗೋದಿಲ್ಲ. ಆ ಬೆತ್ತದಿಂದ, ನಾಲ್ಕು ಬಾರಿಸಿ ಹೇಳಿಸು.

**ಆಹಿಂತಕ** (ತಮಟೆ ಹೊಡೆಯುವ ಕೋಲನ್ನು ಮೇಲೆತ್ತಿ) ಅಯ್ಯಾ, ಚಾರುದತ್ತ ಯಾಕೆ ಸುಮ್ಮನಿದೀಯೆ. ಹೇಳು.

**ಚಾರುದತ್ತ** (ಸ್ವಗತ) ಸಾಯುತ್ತೇನೆ ಅನ್ನೋ ಭೀತಿ ಅಥವಾ ದುಃಖ ನನಗೆ ಇಲ್ಲ. ಆದರೆ ನನ್ನ ಪ್ರೀತಿಯ ಹೆಣ್ಣನ್ನು ನಾನೇ ಕೈಯಾರೆ ಕೊಂದೆ ಅನ್ನೋ ಸುಳ್ಳು ಹೇಳಲು ಬಾಯಿ ಕಟ್ಟುತ್ತಿದೆ. (ಪ್ರಕಾಶ) ಮಹಾಜನಗಳೆ, ಪಾಪಿಯಾದ ನಾನು ಆ ವಸಂತಸೇನೆಯನ್ನು—ಮುಂದಕ್ಕೆ ಇವನೇ ತಿಳಿಸುವನು.

**ಶಕಾರ** ಕೊಂದೆ—ಕೊಂದೆ—ಹ್ಞೂ ಹೇಳು.

**ಚಾರಂದತ್ತ** ನೀನೇ ಹೇಳಿದೆಯಲ್ಲ, ಇನ್ನು ನಾನು ಹೇಳೋದೇನಿದೆ ?

**ಗೋಹ** ಏ ಆಹಿಂತಕ, ಇವತ್ತು ಕೊಲ್ಲೋ ಸರದಿ ನಿನ್ನದಪ್ಪ.

**ಆಹಿಂತಕ** ಛೆ ಛೆ, ಉಂಟೆ? ಇವತ್ತು ನಿನ್ನ ಸರದಿ.

**ಗೋಹ** ತಾಳು ಲೆಕ್ಕ ಹಾಕೋಣ (ಬೆರಳು ಎಣಿಸುತ್ತ ಏನೇನೋ ಗೊಣಗಿಕೊಂಡು) ಹೌದು, ನನ್ನದೇ ನಿಜ. ಆದರೆ ಒಂದು ಕ್ಷಣ ತಾಳು.

**ಆಹಿಂತಕ** ಅದೇನು ?

**ಗೋಹ** ನನ್ನ ತಂದೆ ಸಾಯೋ ಕಾಲದಲ್ಲಿ ನನಗೆ "ಮಗೂ, ಕೊಲ್ಲೋ ಸರದಿ ನಿನಗೆ ಬಂದಾಗ ಆ ಕೆಲಸಕ್ಕೆ ಅವಸರ ಮಾಡಬೇಡ. ಸ್ವಲ್ಪ ನಿಧಾನ ಮಾಡಿ ನಂತರ ಕೆಲಸ ನಡೆಸು" ಅಂತ ಹೇಳಿದ್ದರು.

**ಆಹಿಂತಕ** ಅದೇಕೆ ಹಾಗೆ ಹೇಳಿದರು ?

ಗೋಪ — ಯಾರಾದರೂ ಉದಾರಿ ಶ್ರೀಮಂತರು ಹಣ ಕೊಟ್ಟು ಸಾಯಬೇಕಾದವನನ್ನು ಬಿಡಿಸಬಹುದು. ರಾಜನಿಗೆ ಮಗ ಹುಟ್ಟಿ ಆ ಸಂತೋಷಕ್ಕೆ ವಧ್ಯನ ಬಿಡುಗಡೆ ಆಗಬಹುದು. ಅಥವಾ ರಾಜನೇ ಹೋಗಿ ಬೇರೆ ರಾಜರು ಬಂದುಬಿಡಬಹುದು. ಯಾವುದೇ ಆಗಲಿ ಒಂದು ಜೀವ ಉಳಿಯೋದಾದರೆ ಉಳೀಲಿ ಅಂತ.

ಶಕಾರ — ಏನೆಂದೆ? ಬೇರೆ ರಾಜ ಬರ್ತಾನೆಯೆ? ಎಲೋ ಇವನನ್ನು ಬೇಗ ಕೊಲ್ಲಿ. (ಸ್ವಗತ) ಚಾರುದತ್ತ ಸತ್ತದ್ದನ್ನು ನೋಡಿಯೇ ಹೋಗೋದು ಯೋಗ್ಯ.

ಗೋಹ — ಅಯ್ಯಾ ಚಾರುದತ್ತ. ತಪ್ಪೇನಾದರೂ ಇದ್ದರೆ ರಾಜಾಜ್ಞೆಯದು; ನಮ್ಮದಲ್ಲ. ನೀನು ಕಡೆಗಳಿಗೆಯಲ್ಲಿ ಸ್ಮರಿಸಬೇಕಾದ್ದು ಏನಾದರೂ ಇದ್ದರೆ ಅದನ್ನು ಮಾಡಿ ಮುಗಿಸು. ರಾಜಾಜ್ಞೆ ನಡೆಸುವ ಹೊತ್ತಾಯಿತು.

ಚಾರುದತ್ತ — (ಉದ್ವೇಗದಿಂದ) ಪ್ರಿಯೆ, ವಸಂತಸೇನೆ, ನಿನ್ನಂಥವಳ ಪ್ರೀತಿಯನ್ನು ಪಡೆದ ಅದೃಷ್ಟವಂತ ನಾನು. ಅಂಥ ನನಗೆ ಕಡೆಯಲ್ಲಿ ಎಂಥ ಅಪಕೀರ್ತಿ ಬಂದು ಹೋಯ್ತು?

(ಗಾಬರಿಗೊಂಡಿರುವ ವಸಂತಸೇನೆ ಮತ್ತು ಭಿಕ್ಷು ಬರುವರು)

ಭಿಕ್ಷು — ಅಮ್ಮ, ಜನ ಏಕೆ ಸೇರಿದ್ದಾರೆ ಅಂತ ತಿಳಿಯಿತು. ದೊಡ್ಡ ಅನಾಹುತ ನಡೆದಿದೆ. ಚಾರುದತ್ತ ನಿನ್ನನ್ನು ಕೊಂದ ಅಂತ ತಪ್ಪು ತಿಳಿದು ಅವನನ್ನು ಕೊಲ್ಲೋದಕ್ಕೆ ಕರೆದುಕೊಂಡು ಹೋಗ್ತಿದಾರೆ.

ವಸಂತಸೇನೆ — ಅಯ್ಯೋ, ಅನ್ಯಾಯವೆ! ನನ್ನಿಂದಾಗಿ ಚಾರುದತ್ತನ ಜೀವಕ್ಕೆ ಅಪಾಯ ಬಂತೆ? ಅಪ್ಪ! ಬೇಗ ಹೋಗಿ ಅದನ್ನು ತಪ್ಪಿಸೋಣ, ನಡಿ. (ಜನಗಳನ್ನು ತಳ್ಳಿಕೊಂಡು ಚಾರುದತ್ತ ಇದ್ದಲ್ಲಿಗೆ ಬಂದು) ಅಯ್ಯಾ, ಬೇಡಿ ಬೇಡಿ. ಆರ್ಯನನ್ನು ಕೊಲ್ಲಬೇಡಿ. ಯಾರನ್ನು ಕೊಂದ ಅಂತ ಇವನಿಗೆ ಶಿಕ್ಷೆಯಾಗಿದೆಯೋ ಆ ವಸಂತಸೇನೆ ನಾನೇ. ನಾನೇ ಬಂದಿದೇನೆ.

ಗೋಹ — ಯಾರಿದು? ಹೀಗೆ ಬೇಡ ಬೇಡ ಎಂದು ತಡೆಯುತ್ತಾಳಲ್ಲ? (ಗಮನಿಸಿ ನೋಡಿ) ಏನು ವಿಚಿತ್ರ! ಇವಳೇ ವಸಂತಸೇನೆ! ಅಯ್ಯಾ ಆಹಿಂತಕ, ನಿಷ್ಕಾರಣವಾಗಿ ಚಾರುದತ್ತನನ್ನು ಕೊಲ್ಲುತ್ತಿದ್ದೆವಲ್ಲ!

ವಸಂತಸೇನೆ — ಆರ್ಯ ಚಾರುದತ್ತ! (ಬಳಿ ಹೋಗಿ ಭುಜದ ಮೇಲೆ ಒರಗಿ ನಿಲ್ಲುವಳು)

ಚಾರುದತ್ತ — (ಪ್ರೀತಿಯಿಂದ ಅವಳ ಕೈ ಹಿಡಿದುಕೊಂಡು) ವಸಂತಸೇನೆ! ನಾನು ಎಂಥ ಅದೃಷ್ಟವಂತ!

ಭಿಕ್ಷು — ಒಡೆಯರೆ, ಇದೇನಿದು ನಿಮ್ಮ ಸ್ಥಿತಿ?

ಆಹಿಂತಕ — ಸದ್ಯ! ಒಬ್ಬ ಸಜ್ಜನನನ್ನು ನಾವು ಕೊಂದುಬಿಡುತ್ತಿದ್ದೆವಲ್ಲ.

ಭಿಕ್ಷು — ಹಾಗಾದರೆ ಇನ್ನು ಅವರನ್ನು ಕೊಲ್ಲುವುದಿಲ್ಲ ತಾನೆ ?

ಗೋಹ — ಇಲ್ಲ. ಇಲ್ಲ.

ಅಹಿಂತಕ — ಗೋಹ, ಇಲ್ಲಿಯೇ ಇರು. ನಾನು ಮಹಾರಾಜರಲ್ಲಿ ಈ ವಿಷಯವನ್ನು ಬಿನ್ನವಿಸಿ ಬರುತ್ತೇನೆ. (ಹೋಗುವನು)

ಶಕಾರ — (ವಸಂತಸೇನೆಯನ್ನು ನೋಡಿ ಭಯದಿಂದ) ಎಲಾ ! ಈ ನೀಚೆ ಹೇಗೆ ಬದುಕಿ ಬಂದಳು ? ಇವಳನ್ನು ನೋಡಿ ನನ್ನ ಪ್ರಾಣವೇ ಗಂಟಲಿಗೆ ಬರುತ್ತಿದೆಯಲ್ಲ ! ಇಲ್ಲಿಂದ ಹೇಗಾದರೂ ತಪ್ಪಿಸಿಕೊಂಡು ಹೋಗಿಬಿಡುತ್ತೇನೆ. (ಮೆಲ್ಲಗೆ ಅತ್ತ ಇತ್ತ ನೋಡುತ್ತ ಪಲಾಯನ ಮಾಡುವನು)

ಅಹಿಂತಕ — (ಬಂದು) ಯಾರು ಆಕೆಯ ಕೊಲೆಗೆ ಪ್ರಯತ್ನಿಸಿದ್ದರೋ ಅವರನ್ನೇ ಕೊಲ್ಲಿ ಎಂದು ಮಹಾರಾಜರು ತಿಳಿಸಿದ್ದಾರೆ. ಶಕಾರ ಎಲ್ಲಿ ಹೋದನೋ ನೋಡಿ ಎಳೆದುಕೊಂಡು ಬರುತ್ತೇನೆ.

ಚಾರುದತ್ತ — ವಸಂತಸೇನೆ ! ಇದೇನು ನಿಜವೊ ಅಥವಾ ನನ್ನ ಭ್ರಾಂತಿಯೊ ? ಸತ್ತವರು ಬರುವುದೆಂದರೇನು ? ನನ್ನ ಕಣ್ಣು ಸುಳ್ಳು ಹೇಳುತ್ತಿಲ್ಲ ತಾನೆ ?

ವಸಂತಸೇನೆ — ಇಲ್ಲ ಚಾರುದತ್ತ. ಯಾರಿಂದ ನಿನಗೆ ಈ ದುರವಸ್ಥೆ ಬಂತು ಅಂತ ಕೇಳಿದೆನೊ ಆ ವಸಂತಸೇನೆಯೇ ನಾನು. (ಕಣ್ಣೀರನ್ನು ಒರೆಸಿಕೊಳ್ಳುವಳು) ಇದೆಲ್ಲ ಹೇಗಾಯಿತು ?

ಚಾರುದತ್ತ — ಶಕಾರನಿಂದ, ಮೊದಲಿನಿಂದಲೂ ಅವನಿಗೆ ನನ್ನ ಮೇಲೆ ದ್ವೇಷ. ನಿನ್ನನ್ನು ನಾನು ಕೊಂದೆ ಎಂದು ಆರೋಪಿಸಿ ಇಷ್ಟೆಲ್ಲ ಮಾಡಿದ.

ವಸಂತಸೇನೆ — ಶಿವ ಶಿವಾ ! (ಕಿವಿಯನ್ನು ಮುಚ್ಚಿಕೊಂಡು) ಎಂಥ ದುರಾತ್ಮ ! ತಾನೇ ನನ್ನನ್ನು ತೀರಿಸಲು ಪ್ರಯತ್ನಪಟ್ಟು ಅದನ್ನು ನಿನ್ನ ಮೇಲೆ ಹೊರಿಸಿದನೆ ?

ಚಾರುದತ್ತ — (ಭಿಕ್ಷುವನ್ನು ತೋರಿಸಿ) ವಸಂತಸೇನೆ, ಈತ ಯಾರು ?

ವಸಂತಸೇನೆ — ಆ ದುಷ್ಟ ಕತ್ತು ಹಿಸುಕಿ ನಾನು ಮೂರ್ಛೆಹೋಗಿದ್ದಾಗ ನನ್ನನ್ನು ರಕ್ಷಿಸಿದ ಪುಣ್ಯಾತ್ಮ.

ಚಾರುದತ್ತ — ಅಯ್ಯಾ, ಅಕಾರಣ ಬಂಧು, ನೀನು ಯಾರು ? ಎಲ್ಲಿಯವನು ?

ಭಿಕ್ಷು — ಸ್ವಾಮಿ, ನನ್ನ ಜ್ಞಾಪಕವಿಲ್ಲವೆ ? ನಿಮ್ಮ ಸೇವೆ ಮಾಡುತ್ತಿದ್ದ ಸಂವಾಹಕ ಎಂಬ ವ್ಯಕ್ತಿ ನಾನೇ. ಜೂಜಿನಲ್ಲಿ ಸೋತು ವಿಪತ್ತಿಗೆ ಸಿಕ್ಕಿದ್ದೆ. ನಿಮ್ಮ ಸೇವಕ ಅನ್ನೋ ಅಭಿಮಾನದಿಂದ ಈಕೆ ತಮ್ಮ ಕಡಗ ಕೊಟ್ಟು ನನ್ನನ್ನು ಬಿಡಿಸಿದರು. ಅನಂತರ ಏನೋ ಜುಗುಪ್ಸೆ ಹುಟ್ಟಿ ಸನ್ಯಾಸಿಯಾದೆ.

ಶರ್ವಿಳಕ — (ಬಂದು) ಆರ್ಯ ಚಾರುದತ್ತರಿಗೆ ನಮಸ್ಕಾರ (ನಮಸ್ಕರಿಸುವನು)

ಚಾರುದತ್ತ ನೀವು ಯಾರು ಅಂತ ತಿಳಿಯಲಿಲ್ಲ.

ಶರ್ವಿಳಕ ನಿಮ್ಮ ಮನೆಗೆ ಕನ್ನ ಹಾಕಿದ್ದವನು. ವಸಂತಸೇನೆಯ ಒಡವೆ ಕದ್ದ ಅಯೋಗ್ಯ ನಾನೇ.

ಚಾರುದತ್ತ ಛೆ ಛೆ. ನಿಂದಿಸಿಕೊಳ್ಳಬೇಡ. ಅದೆಲ್ಲದರಿಂದ ಕಡೆಗೆ ಒಳ್ಳೆಯದೇ ಆಯಿತು. (ಶರ್ವಿಳಕನನ್ನು ಆಲಿಂಗಿಸಿಕೊಳ್ಳುವನು)

ಶರ್ವಿಳಕ ನಿಮಗೊಂದು ಸುದ್ದಿ. ಸಚ್ಚರಿತ್ರನಾದ ನನ್ನ ಮಿತ್ರ ಆರ್ಯಕ ಪಾಲಕನನ್ನು ಸಂಹರಿಸಿ ಈ ರಾಜ್ಯಕ್ಕೆ ದೊರೆಯಾದ.

ಚಾರುದತ್ತ ಏನು, ಏನಂದೆ ?

ಶರ್ವಿಳಕ ಹಿಂದೆ ನಿನ್ನ ರಥ ಹತ್ತಿ ಬಂದು ಒಬ್ಬ ವ್ಯಕ್ತಿ ನಿನಗೆ ಶರಣಾಗತನಾಗಲಿಲ್ಲವೆ ? ಅವನೇ ಆರ್ಯಕ, ಅವನು ಪಾಲಕನನ್ನು ಕೊಂದುಹಾಕಿದ.

ಚಾರುದತ್ತ ಪಾಲಕನು ಕಾರಣವಿಲ್ಲದೆ ಒಬ್ಬನನ್ನು ಬಂಧಿಸಿ ಅನಂತರ ನೀನು ಬಿಡಿಸಿದೆಯಲ್ಲ ಅದೇ ಆರ್ಯಕನೋ ಇವನು ?

ಶರ್ವಿಳಕ ಹೌದು ಅವನೇ.

ಚಾರುದತ್ತ ಸಂತೋಷ. ನಿನ್ನ ಸಾಹಸ ಸಾರ್ಥಕವಾಯಿತು.

ಶರ್ವಿಳಕ ಆರ್ಯಕನಿಗೆ ನೀನು ಹಿಂದೆ ಮಾಡಿದ ಸಹಾಯದಿಂದ ಅವನು ಈಗ ರಾಜನಾಗಿದ್ದಾನೆ. ಕೃತಜ್ಞನಾದ ಅವನು ನಿನಗೆ ವೇಣಾನದೀ ತೀರದ ಕುಶಾವತೀ ರಾಜ್ಯವನ್ನು ಕೊಟ್ಟಿದ್ದಾನೆ. ನೀನು ಅದನ್ನು ಸ್ವೀಕರಿಸಬೇಕೆಂದು ಅವನ ವಿಜ್ಞಾಪನೆ.

ಚಾರುದತ್ತ ನಾನು ಅಂಥ ಸಹಾಯ ಏನನ್ನು ತಾನೆ ಮಾಡಿದೆ ? ಇದೆಲ್ಲ ದೈವಾನುಗ್ರಹವೇ ಸರಿ.

(ತೆರೆಯಲ್ಲಿ— " ಏ ಶಕಾರ, ಎಲ್ಲಿ ಓಡ್ತಿದೀಯೋ ನಿಲ್ಲು. ಇದುವರೆಗೆ ಮಾಡಿದ್ದಕ್ಕೆಲ್ಲ ಈಗ ಅನುಭವಿಸುವಿಯಂತೆ ಬಾ "—ಎಂಬ ಮಾತು ಕೇಳುವುದು. ಸ್ವಲ್ಪ ಗಲಾಟೆ. ಆಹಿಂತಕ ಐದಾರು ಜನರೊಡನೆ ಸೇರಿಕೊಂಡು ಶಕಾರನನ್ನು ಎಳೆದು ತರುವನು)

ಶಕಾರ ಅಯ್ಯೋ ದುರದೃಷ್ಟವೆ ! ಹಗ್ಗ ಕಿತ್ತುಕೊಂಡ ಕತ್ತೆ ಹಾಗೆ ಇಷ್ಟುದೂರ ಓಡಿ ಬಂದಿದ್ದರೂ ಮತ್ತೆ ನನ್ನನ್ನ ಹಿಡಿದು ಕುನ್ನಿಯ ಹಾಗೆ ಎಳೆದುಕೊಂಡು ಬಂದರಲ್ಲ ! (ಸುತ್ತಲೂ ನೋಡಿ) ಸುತ್ತ ರಾಜಸೇವಕರಿದ್ದಾರೆ. ಇವರಿಂದ ಪಾರಾಗೋದು ಸಾಧ್ಯ ಇಲ್ಲ. ನನ್ನನ್ನು ಯಾರು ಬಿಡಿಸಿಯಾರು ? (ಯೋಚಿಸಿ ಸ್ವಗತ) ಚಾರುದತ್ತ ತುಂಬ ಉದಾರಿ, ಧರ್ಮಾತ್ಮ. ಅವನ ಕಾಲಿಗೆ ಬಿದ್ದರೆ

ಮಾತ್ರ ನಾನು ಬದುಕೋದು ಸಾಧ್ಯ. (ಚಾರುದತ್ತನ ಬಳಿಗೆ ಹೋಗಿ) ಕಾಪಾಡು ಚಾರುದತ್ತ, ಕಾಪಾಡು.

(ಚಾರುದತ್ತನ ಕಾಲಿಗೆ ಬೀಳುವನು)

ಚಾರುದತ್ತ ಏಳು, ಏಳು. ಮೇಲೇಳು. ಹೆದರಬೇಡ.

ಶರ್ವಿಳಕ (ಕೋಪದಿಂದ) ಹೇಳು ಚಾರುದತ್ತ, ಈ ಪಾಪಿಗೆ ಏನು ಶಿಕ್ಷೆ ಕೊಡೋಣ? ಹಗ್ಗದಿಂದ ಕಟ್ಟಿ ಎಳೆಸುವುದೋ? ಶೂಲಕ್ಕೆ ಏರಿಸುವುದೋ? ಗರಗಸದಿಂದ ಕೊಯಿಸುವುದೋ?

ಚಾರುದತ್ತ ನಾನು ಹೇಳಿದಂತೆ ಮಾಡ್ತೀರೋ?

ಶರ್ವಿಳಕ ಖಂಡಿತ.

ಶಕಾರ (ದೈನ್ಯದಿಂದ) ಚಾರುದತ್ತ, ಕಾಪಾಡು, ನನ್ನ ತಪ್ಪು ಕ್ಷಮಿಸಿಬಿಡು. (ವಸಂತಸೇನೆ ಚಾರುದತ್ತನ ಕೊರಳಿನಲ್ಲಿದ್ದ ವಧ್ಯಮಾಲೆಯನ್ನು ತೆಗೆದು ಶಕಾರನ ಮೇಲೆ ಎಸೆಯುವಳು)

ಶಕಾರ ಪ್ರಸನ್ನಳಾಗು ದಾಸೀಪುತ್ರಿ. ಪ್ರಸನ್ನಳಾಗು. ನಾನು ಇನ್ನೊಂದು ಸಲ ನಿನ್ನನ್ನು ಸಾಯಿಸೋದಿಲ್ಲ. ದಯವಿಟ್ಟು ಕಾಪಾಡು.

ಶರ್ವಿಳಕ ಚಾರುದತ್ತ, ಹೇಳು, ಈ ನೀಚನಿಗೆ ಏನು ಶಿಕ್ಷೆ ಕೊಡೋಣ?

ಚಾರುದತ್ತ ನಾನು ಹೇಳಿದ ಹಾಗೇ ಮಾಡ್ತೀರೋ?

ಶರ್ವಿಳಕ ಖಂಡಿತ.

ಚಾರುದತ್ತ ಸತ್ಯವೋ?

ಶರ್ವಿಳಕ ಸತ್ಯ.

ಚಾರುದತ್ತ ಹಾಗಾದರೆ ಇವನನ್ನು ಈಗಲೇ......

ಶರ್ವಿಳಕ ಕೊಲ್ಲಿಸಿಬಿಡಲೋ?

ಚಾರುದತ್ತ ಬೇಡ, ಬೇಡ. ಬಿಟ್ಟುಬಿಡಿ.

ಶರ್ವಿಳಕ ಏಕೆ?

ಚಾರುದತ್ತ ತಪ್ಪು ಮಾಡಿದ ಶತ್ರುವೇ ಆದರೂ ಕಾಲಿಗೆ ಬಿದ್ದು ಕ್ಷಮೆ ಕೇಳುವಾಗ ಶಿಕ್ಷೆ ಕೊಡದು. ಬಿಟ್ಟುಬಿಡಿ.

ಶರ್ವಿಳಕ ಎಲೋ ಇವನನ್ನು ಬಿಟ್ಟುಬಿಡಿ.

ಶಕಾರ ಬದುಕಿದೆಯಾ ಬಡ ಜೀವವೆ! (ಕೂಡಲೆ ಹೊರಟುಬಿಡುವನು).

(ತೆರೆಯಲ್ಲಿ)

ಅಯ್ಯೋ ಆರ್ಯ ಚಾರುದತ್ತನ ಪತ್ನಿ ಅಗ್ನಿಪ್ರವೇಶ ಮಾಡುತ್ತಿದ್ದಾಳೆ ! ಜನ ತಡೆದರೂ ಕೇಳುತ್ತಿಲ್ಲ. ಮೈಗೆ ಆವಂರುತ್ತಿರುವ ಮಗನನ್ನೂ ಲಕ್ಷಿಸುತ್ತಿಲ್ಲ. ಇನ್ನೇನು ಗತಿ !

ಚಂದನಕ (ಬಂದು) ಅಯ್ಯೋ, ಅನಾಹುತವಾಗ್ತಿದೆ. ಧೂತಾದೇವಿ ಅಗ್ನಿಪ್ರವೇಶ ಮಾಡ್ತಿದಾಳೆ.

ಶರ್ವಿಳಕ ಯಾರು ? ಓ, ಚಂದನಕ. ಇದೇನು ಚಂದನಕ ನೀನಂ ತಡೆಯಲಿಲ್ಲವೆ ?

ಚಂದನಕ ಚಾರುದತ್ತ ವಿಪತ್ತಿನಿಂದ ಪಾರಾದ ಎಂದು ಹೇಳಿದರೂ ನಂಬುತ್ತಿಲ್ಲ. ಅವಳನ್ನು ಉಳಿಸಲು ಹೇಳುತ್ತಿದ್ದಾರೆ ಎಂದು ತಿಳಿದಂತಿದೆ.

ಚಾರುದತ್ತ ಇದೇನು ಪ್ರಿಯೆ ! ನಾನು ಜೀವಂತನಾಗಿದ್ದರೂ ಎಂಥ ಸಾಹಸಕ್ಕೆ ಕೈಹಾಕಿ ಬಿಟ್ಟಿರುವೆ ! ಇಗೋ ನಾನೇ ಬಂದೆ ತಾಳು ! (ಬೇಗನೆ ಧಾವಿಸುವನಂ, ಅವನ ಹಿಂದೆ ಉಳಿದವರೂ ಹೋಗುವರು) (ಧೂತಾದೇವಿ ಬೆಂಕಿಗೆ ಬೀಳಲು ಹೋಗುತ್ತಿದ್ದಾಳೆ. ರೋಹಸೇನ ಅವಳ ಸೆರಗಂ ಜಗ್ಗಿ ತಡೆಯುತ್ತಿದ್ದಾನೆ ವಿದೂಷಕ ರದನಿಕೆ ದುಃಖಿಸುತ್ತ ನಿಂತಿರುವರು)

ಧೂತಾದೇವಿ (ಕಣ್ಣೀರು ಹಾಕುತ್ತ) ನನ್ನನ್ನು ಬಿಡಂ ಮಗು, ತಡೀಬೇಡ. ಅವರಿಗೆ ಅಮಂಗಳ ಉಂಟಾಯಿತು ಅನ್ನೋ ಮಾತು ಕೇಳೋದಕ್ಕೆ ಮುಂಚೆಯೇ ನಾನು ನಡೆದಂಬಿಡ್ತೇನೆ. (ಅಗ್ನಿಗೆ ನಮಸ್ಕರಿಸುವಳಂ)

ರೋಹಸೇನ ಅಮ್ಮಾ, ನಾನೂ ನಿನ್ನ ಜೊತೆಗೇ ಬರ್ತೇನೆ. ನನ್ನನ್ನೂ ಕರಕೊಂಡು ಹೋಗಮ್ಮಾ, ಅಮ್ಮಾ, (ಅಳುವನು).

(ಚಾರುದತ್ತ. ವಸಂತಸೇನೆ, ಶರ್ವಿಳಕ, ಸ್ಥಾವರಕ, ಭಿಕ್ಷು, ಚಂದನಕ ಬರುವರು)

ಚಾರುದತ್ತ (ಬೇಗನೆ ಧೂತಾದೇವಿಯ ಬಳಿ ಬಂದು) ಇದೇನು ಸಾಹಸ ನಡೆಸಿರುವೆ ದೇವಿ ? (ಅವಳನ್ನು ಹಿಂದೆ ಎಳೆದುಕೊಳ್ಳುವನು)

ವಿದೂಷಕ ಎಲಾ ! ಚಾರುದತ್ತ ಬಂದನೆ ? (ಹೋಗಿ ಅವನನ್ನು ತಬ್ಬಿಕೊಂಡು) ಮಿತ್ರ, ಕ್ಷೇಮವೆ ?

ಚಾರುದತ್ತ ಸುಖವಾಗಿದ್ದೀಯಾ, ಮೈತ್ರೇಯ ?

ಧೂತಾದೇವಿ (ವಸಂತಸೇನೆಯನ್ನು ಅಪ್ಪಿಕೊಂಡು) ತಂಗಿ, ನಿನ್ನನ್ನು ನೋಡುತ್ತಿರುವುದು ಎಂಥ ಸುಯೋಗ ! ಸಂಖವಾಗಿದ್ದೀಯಾ ?

ವಸಂತಸೇನೆ ಈಗ ನನಗೆ ಸುಖ ಉಂಟಾಯಿತು.

ರೋಹಸೇನ (ಓಡಿ ಬಂದು) ಅಪ್ಪಾ ! (ಚಾರುದತ್ತನನ್ನು ತಬ್ಬಿಕೊಳ್ಳುವನು)

ಶರ್ವಿಳಕ ದೈವ ದೊಡ್ಡದು. ಚಾರುದತ್ತ, ನಿನ್ನ ಪರಿವಾರವೆಲ್ಲ ದೊಡ್ಡ ವಿಪತ್ತಿನಿಂದ ಪಾರಾಯಿತು.

ಚಾರುದತ್ತ ಅದಕ್ಕೆ ನೀನೇ ಕಾರಣ. ನಿನಗೆ ನಾನು ಕೃತಜ್ಞ.

ಶರ್ವಿಳಕ ಆರ್ಯೆ ವಸಂತಸೇನೆ, ಆರ್ಯಕ ಮಹಾರಾಜ ನಿನ್ನ ಉದಾತ್ತ ನಡತೆಗೆ ಸಂತೋಷಪಟ್ಟು ನಿನಗೆ ' ಕುಲವಧು ' ಶಬ್ದವನ್ನು ಅನುಗ್ರಹಿಸಿದ್ದಾನೆ.

ವಸಂತಸೇನೆ ನಾನು ನಿಜವಾಗಿ ಕೃತಾರ್ಥೆ.

ಶರ್ವಿಳಕ (ವಸಂತಸೇನೆಗೆ ಅವಗುಂಠನ ಹಾಕಿ, ಚಾರುದತ್ತನ ಕಡೆ ನೋಡಿ) ಆರ್ಯ, ಇನ್ನು ಮುಂದೆ ಈ ಭಿಕ್ಷು ಬೌದ್ಧರಿಗೆಲ್ಲ ಗುರುವಾಗಿರಲಿ.

ಭಿಕ್ಷು ನನಗಿದೆಲ್ಲ ಯಾಕೆ? (ಸಂತೃಪ್ತಿಯ ಭಾವ ತೋರಿಸುವನು)

ಶರ್ವಿಳಕ ಸ್ಥಾವರಕ ದೊಡ್ಡ ಸಾಹಸ ಮಾಡಿದ್ದಾನೆ. ಅವನನ್ನು ಬಹುಮಾನಿಸುವುದು ಹೇಗೆ?

ಚಾರುದತ್ತ ಅವನ ದಾಸ್ಯ ಇವತ್ತಿಗೇ ಮುಗಿಯಲಿ. ಈ ಚಂಡಾಲರಿಬ್ಬರೂ ಗುಣದಿಂದ ದೊಡ್ಡವರು. ಆ ವೃತ್ತಿಯ ಉಳಿದವರಿಗೆಲ್ಲ ಅವರು ಮುಖ್ಯಸ್ಥರಾಗಲಿ. ಚಂದನಕ ನಗರ ರಕ್ಷಕರ ಮೇಲಧಿಕಾರಿಯಾಗಿರಲಿ.

ಶರ್ವಿಳಕ ಎಲ್ಲ ಸರಿಯಾಯಿತು ಚಾರುದತ್ತ. ಆ ನೀಚ ಶಕಾರ ಒಬ್ಬನನ್ನು ನನಗೆ ಬಿಟ್ಟುಬಿಡು. ಪರಲೋಕ ಕಾಣಿಸಿಬಿಡುತ್ತೇನೆ.

ಚಾರುದತ್ತ ಛೆ ಛೆ! ಪಾಪ! ಅವನ ಪಾಡಿಗೆ ಅವನನ್ನು ಬಿಟ್ಟುಬಿಡು.

ಶರ್ವಿಳಕ ಅಯ್ಯಾ, ನಿನಗೆ ಬೇರೆ ಯಾವ ಪ್ರಿಯಕಾರ್ಯವನ್ನು ಮಾಡಲಿ?

ಚಾರುದತ್ತ ನೀನು ಮಾಡದೆ ಉಳಿಸಿದ್ದೇನು? ನನ್ನ ಅಪವಾದ ಹೋಯಿತು, ಶರಣು ಬಂದ ಶತ್ರುವನ್ನು ಉಳಿಸಿದ್ದಾಯಿತು. ನಿನ್ನಂಥ ಸಜ್ಜನನ ಸ್ನೇಹ ಸಿಕ್ಕಿತು. ಇನ್ನೇನು ತಾನೇ ಬೇಕು? ನಡೆ ಹೋಗೋಣ. (ಎಲ್ಲರೂ ಹೋಗುವರು)

* * * *

WD 158—GTBPM—1,00,000—10-5-78